ಎ. ಎನ್. ಮೂರ್ತಿರಾವ್ ಮತ್ತು
ನಿಟ್ಟೂರು ಶ್ರೀನಿವಾಸರಾವ್ ಶತಮಾನ ವಿಶೇಷಾಂಕ



# ಕರ್ನಾಟಕ ಲೋಚನ

ಸಂಪುಟ ೧೮, ೧೯ ಜೂನ್, ಡಿಸೆಂಬರ್ ೨೦೦೩ ಸಂಚಿಕೆ ೧, ೨



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

## 'ಕರ್ನಾಟಕಲೋಚನ'

**ಸಂಪಾದಕ ಮಂಡಲಿ**



**ಸದಸ್ಯರು**



**ಲೇಖನಗಳು - ಟಿಪ್ಪಣಿಗಳು**

ಸಂಶೋಧನಾತ್ಮಕ, ಪಾಂಡಿತ್ಯ-ವಿದ್ವತ್ಪೂರ್ಣ ಲೇಖನಗಳನ್ನು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಶೋಧಿತ - ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರಸಾಹಿತ್ಯದ ಗ್ರಂಥಗಳು - ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಾಮಾನ, ಇವುಗಳಿಗೆ ಸಂಬಂಧಿಸಿದ ಟೀಕೆ-ಟಿಪ್ಪಣಿಗಳು ಇವುಗಳಿಗೆ 'ಕರ್ನಾಟಕಲೋಚನ' ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

**ಲೇಖನಗಳಿಗೆ ಆಹ್ವಾನ**

ಮೇಲ್ಕಂಡಂತೆ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ, ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. ಲೋಚನದ ಗಾತ್ರ ಪರಿಮಿತವಾದ್ದರಿಂದ ಲೇಖನಗಳು ಅಚ್ಚಿನ ೬-೭ ಪುಟಗಳಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿ ಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ-ಲೇಖನಾಧಾರ ವಿವರಗಳನ್ನು ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ವಿನಂತಿ.

**ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳಿಸಬೇಕು**

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು






ಸಿದ್ಧವಾಗಿರುವ ಬಿ.ಎಂ.ಶ್ರೀ ಕಲಾಭವನದ ಪೂರ್ವ ಭಾಗ
ಎಂ.ವಿ.ಸೀ. ಸಭಾಂಗಣ ಮತ್ತು ರಜತ ಮಹಡಿ

# ರಜತ ಮಹೋತ್ಸವ ಸಮಾರಂಭ

ಮಾನ್ಯರೇ

ಆಚಾರ್ಯ ಬಿ.ಎಂ. ಶ್ರೀಕಂಠಯ್ಯನವರ ಹೆಸರಿನಲ್ಲಿ 6-5-1979ರಲ್ಲಿ ರಾಷ್ಟ್ರಕವಿ ಕುವೆಂಪು ಅವರಿಂದ ಉದ್ಘಾಟನೆಯಾದ ಈ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರೊ॥ ಎಂ.ವಿ. ಸೀತಾರಾಮಯ್ಯನವರಿಂದ ಸ್ಥಾಪಿತಗೊಂಡಿತು. ಇದು 2004ನೇ ಮೇ 6ಕ್ಕೆ 25 ವರ್ಷಗಳನ್ನು ಪೂರೈಸಲಿದೆ. ಈ ಶುಭ ಸಂದರ್ಭದಲ್ಲಿ 2003-2004ನೇ ವರ್ಷಪೂರ್ತಿ ರಜತ ಮಹೋತ್ಸವ ವರ್ಷವನ್ನಾಗಿ ಆಚರಿಸಲು ಉದ್ದೇಶಿಸಿ ಹಲವಾರು ಸಾಹಿತ್ಯಿಕ, ಸಾಂಸ್ಕೃತಿಕ, ಶೈಕ್ಷಣಿಕ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಬರುತ್ತಿದ್ದೇವೆ. ಯಾವುದೇ ಸಂಸ್ಥೆ 25 ವರ್ಷಗಳಷ್ಟು ದೀರ್ಘಾವಧಿ ಅಸ್ತಿತ್ವದಲ್ಲಿದ್ದು ಕ್ರಿಯಾಶೀಲವಾಗಿರುವುದು ಹೆಮ್ಮೆಯ ವಿಷಯ. ಸಂತಸದ ಸಂಗತಿ. ಈ ಸಂತಸವನ್ನು ತಮ್ಮ ಸಹಕಾರ ಸಹಯೋಗದೊಂದಿಗೆ ಅರ್ಥಪೂರ್ಣವಾಗಿ ಆಚರಿಸಲು ಆಶಿಸುತ್ತೇವೆ. ರಜತ ಮಹೋತ್ಸವವನ್ನು ಮೂರು ದಿನ ಪರ್ಯಂತ ಇದೇ ವರ್ಷದ ಮೇ ತಿಂಗಳಲ್ಲಿ ಬಿ.ಎಂ.ಶ್ರೀ. ಕಲಾಭವನದಲ್ಲಿ ನಡೆಸಲಾಗುವುದು.

ಕನ್ನಡ ವಿದ್ವತ್ತೆಯ ಬೆಳವಣಿಗೆಗೆ ಪೂರಕವಾಗಿ ಶ್ರಮಿಸುತ್ತಿರುವ ಪ್ರತಿಷ್ಠಾನದ ಪ್ರಮುಖ ಚಟುವಟಿಕೆಗಳು ಹೀಗಿವೆ:

ಪ್ರಾಚೀನ ಹಸ್ತಪ್ರತಿ ಸಂಗ್ರಹ, ಸಂರಕ್ಷಣೆ, ಸಂಪಾದನೆ; ಹಸ್ತಪ್ರತಿಶಾಸ್ತ್ರ ತರಗತಿ, ಹಳಗನ್ನಡ ಕಾವ್ಯಾಭ್ಯಾಸ ಶಿಬಿರ; ಸಿರಿಕಂಟ ವೇದಿಕೆ; ಮೌಲಿಕ ಗ್ರಂಥ ಪ್ರಕಟಣೆ; 'ಕರ್ನಾಟಕ ಲೋಚನ' ವಿದ್ವತ್ ಪತ್ರಿಕೆ ಪ್ರಕಟಣೆ; ಬೆಂಗಳೂರಿನಲ್ಲಿ 'ಬಿ.ಎಂ.ಶ್ರೀ. ಕಲಾಭವನ' ನಿರ್ಮಾಣ (2 ಅಂತಸ್ತುಗಳು ಮುಗಿದು 3ನೇ ಅಂತಸ್ತು ನಿರ್ಮಾಣ ಹಂತದಲ್ಲಿದೆ). ಬೆಳ್ಳೂರಿನಲ್ಲಿ 'ಬಿ.ಎಂ.ಶ್ರೀ. ಶತಮಾನೋತ್ಸವ ಭವನ' ನಿರ್ಮಾಣ, ನಿರ್ವಹಣೆ; ಹಂಪೆಯ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿರುವ ಪಿಎಚ್.ಡಿ.ಸಂಶೋಧನ ಕೇಂದ್ರ, ದತ್ತಿ ಉಪನ್ಯಾಸ ಮಾಲೆಗಳು, ಮೊದಲಾದುವು.

ಈ ರಜತ ಮಹೋತ್ಸವ ಸಂದರ್ಭದಲ್ಲಿ 'ಸಿರಿ ಸಂಗೀತ ಸಾಂಸ್ಕೃತಿಕ ವೇದಿಕೆ ಸ್ಥಾಪನೆ, ಹಸ್ತಪ್ರತಿ ಸೇವಾಕೇಂದ್ರ, ಮನೆಬಾಗಿಲಿಗೆ ಹಸ್ತ ಪ್ರತಿ ಪ್ರದರ್ಶನ', ವಿಚಾರಗೋಷ್ಠಿಗಳನ್ನು ನಡೆಸುವುದರ ಜೊತೆಗೆ ಸ್ಮರಣ ಸಂಚಿಕೆ 'ರಜತಸಿರಿ', 'ಕನ್ನಡ ಸಾಹಿತ್ಯೋಪಾಸಕರು' ಹಾಗೂ '19ನೇ ಶತಮಾನದ ಸಾಹಿತ್ಯ ಚರಿತ್ರೆ', ವಿಶೇಷ ಗ್ರಂಥಗಳನ್ನು ಹೊರತರಲಾಗುವುದು.

ಈ ಎಲ್ಲಾ ಕಾರ್ಯಕ್ರಮಗಳು ಯಶಸ್ವಿಯಾಗಿ ಕಾರ್ಯಗತಗೊಳಿಸಲು ತಾವು ಉದಾರವಾಗಿ ಧನ ಸಹಾಯ ಮಾಡಿ, 'ರಜತಸಿರಿ'ಗೆ ಜಾಹೀರಾತುಗಳನ್ನು ನೀಡಿ ಉಪಕರಿಸಬೇಕೆಂದು ವಿನಮ್ರವಾಗಿ ವಿನಂತಿಸಿಕೊಳ್ಳುತ್ತೇವೆ.

ವಂದನೆಗಳೊಂದಿಗೆ

ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ
ಅಧ್ಯಕ್ಷರು

ನಿಟ್ಟೂರು ಶ್ರೀನಿವಾಸ ರಾವ್
ಗೌರವಾಧ್ಯಕ್ಷರು

# "ಬಿ.ಎಂ.ಶ್ರೀ. ಕಲಾಭವನ" ನಿರ್ಮಾಣಕ್ಕೆ ಸಹಾಯ ಮಾಡಿ



ಸಿದ್ಧವಾಗಿರುವ ಬಿ.ಎಂ.ಶ್ರೀ ಕಲಾಭವನದ ಪಶ್ಚಿಮ ಭಾಗ

ಬಿ.ಎಂ.ಶ್ರೀ. ಕಲಾಭವನದ ನಿರ್ಮಾಣ ವೆಚ್ಚ ನಲವತ್ತು ಲಕ್ಷ ರೂ.ಗಳಾಗಬಹುದೆಂದು ಅಂದಾಜು ಮಾಡಲಾಗಿದೆ. ಮುಖಪುಟದಲ್ಲಿರುವುದು ಉದ್ದೇಶಿತ ಭವನದ ಚಿತ್ರ. ಇದರ ನಿರ್ಮಾಣಕ್ಕಾಗಿ ಸಾಹಿತ್ಯ ಪ್ರೇಮಿಗಳು, ಸಾಹಿತ್ಯಾಸಕ್ತರು, ಸಾಂಸ್ಕೃತಿಕ ಶ್ರೇಯೋಭಿಲಾಷಿಗಳಿಂದ ಉದಾರವಾದ ಧನಸಹಾಯವನ್ನು ಕೋರುತ್ತೇವೆ. ಒಂದು ಇಡೀ ಅಂತಸ್ತು ಅಥವಾ ಒಂದು ಕೊಠಡಿ ನಿರ್ಮಾಣದ ವೆಚ್ಚ ಭರಿಸುವವರನ್ನು ನಿರೀಕ್ಷಿಸುತ್ತೇವೆ. ಆದರೂ ಅಭಿಮಾನಿಗಳು ನೀಡುವ ಯಾವುದೇ ಪ್ರಮಾಣದ ದಾನವನ್ನೂ ಸಹ ಪ್ರತಿಷ್ಠಾನವು ಸಂತೋಷದಿಂದ ಮತ್ತು ಕೃತಜ್ಞತೆಯಿಂದ ಸ್ವೀಕರಿಸುತ್ತದೆ. ಯಥಾಶಕ್ತಿ ದಾನ ಮಾಡುವ ಮೂಲಕ ನಾಡಿನ ಒಂದು ಭವ್ಯ ಸಾಂಸ್ಕೃತಿಕ ಪರಂಪರೆ (ಸಂರಕ್ಷಣೆ, ಬೆಳವಣಿಗೆ, ಪ್ರಸಾರ)ಯಲ್ಲಿ ಪಾಲುದಾರರಾಗಲು ಮನವಿ ಮಾಡಿಕೊಳ್ಳುತ್ತೇವೆ.

ಸದ್ಯಕ್ಕೆ ನೆಲಮಹಡಿ ಮತ್ತು ಎಂ.ವಿ.ಸೀ. ಸಭಾಂಗಣ ಪೂರ್ಣವಾಗಿದ್ದು ೨ನೇ ಮಹಡಿಯ ನಿರ್ಮಾಣಕಾರ್ಯ ಆರಂಭವಾಗಿದೆ. ದಾನಿಗಳು ಪ್ರತಿಷ್ಠಾನಕ್ಕೆ ನೀಡುವ ದಾನಕ್ಕೆ ಸೆಕ್ಷನ್ 80 ಜಿ. ಆದಾಯ ತೆರಿಗೆ (ಆಕ್ಟ್ 1961 ಪ್ರಕಾರ, ಪತ್ರ ಸಂಖ್ಯೆ : ಟ್ರಸ್ಟ್/718/10ಜಿ/380/93-98/)ವಿನಾಯತಿ ಸೌಲಭ್ಯವಿದೆ.

ಚೆಕ್ಕು ಅಥವಾ ಡಿ.ಡಿ.ಗಳನ್ನು 'ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ'ದ ಹೆಸರಿನಲ್ಲಿ ಬರೆದು, ಗೌ॥ ಕಾರ್ಯದರ್ಶಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬಿ.ಎಂ.ಶ್ರೀ. ಕಲಾಭವನ, ನರಸಿಂಹರಾಜಾ ಕಾಲೋನಿ, ಬೆಂಗಳೂರು - ೫೬೦ ೦೧೯, ಇಲ್ಲಿರುವ ಪ್ರತಿಷ್ಠಾನದ ಕಾರ್ಯಾಲಯಕ್ಕೆ ಕಳಿಸಿಕೊಡಲು ಸಾರ್ವಜನಿಕರಲ್ಲಿ ಮನವಿ ಮಾಡಿಕೊಳ್ಳುತ್ತೇವೆ.

**ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ**
ಅಧ್ಯಕ್ಷರು

**ನಿಟ್ಟೂರು ಶ್ರೀನಿವಾಸರಾವ್**
ಗೌರವ ಅಧ್ಯಕ್ಷರು





# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್‌ಪತ್ರಿಕೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬಿ.ಎಂ.ಶ್ರೀ. ಕಲಾಭವನ

ನರಸಿಂಹರಾಜಾ ಕಾಲೋನಿ, ಬೆಂಗಳೂರು - ೫೬೦ ೦೧೯

ದೂರವಾಣಿ : ೨೬೬೧೫೪೮೭೭ ಇಮೇಲ್ : bmsri/trust@yahoo.com

ವೆಬ್‌ಸೈಟ್ : http://in.members.tripodasia.com/bmsri/




ಸಂಪುಟ ೧೮, ೧೯ ಜೂನ್, ಡಿಸೆಂಬರ್ ೨೦೦೩ ಸಂಚಿಕೆ ೧,೨

## ಡಾ|| ಎ. ಎನ್. ಮೂರ್ತಿರಾವ್ ಮತ್ತು ಶ್ರೀ ನಿಟ್ಟೂರು ಶ್ರೀನಿವಾಸರಾವ್ ಶತಮಾನ ವಿಶೇಷಾಂಕ

ಪರಿವಿಡಿ

# KARNATAKA LOCHANA

*Half-Yearly Research Journal, Published by*
**B.M. Sri Smaraka Prathisthana**
**(B.M. Sri Memorial Foundation) N.R. Colony, Bangalore - 560 019**
Ph. : 6615877 e-mail : bmsri/trust@yahoo.com
Website : http://in.members.tripodasia.com/bmsri/



**Vol. 17** **JUNE, DECEMBER 2003-04** **No. 1, 2**

**A. N. MURTHY RAO & SRI NITTOORU SRINIVASA RAO CENTINARY SPECIAL ISSUE**

## CONTENTS






# ಎ. ಎನ್. ಮೂರ್ತಿರಾವ್

(18-6-1900 - 23-8-2003)

ಮೈಸೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಮೂರ್ತಿರಾಯರು ಕನ್ನಡದ ಶ್ರೇಷ್ಠ ವಿದ್ವತ್ ಪರಂಪರೆಯಲ್ಲಿ ಬಿ.ಎಂ.ಶ್ರೀ., ಟಿ.ಎಸ್. ವೆಂಕಣಯ್ಯ, ಎ.ಆರ್. ಕೃಷ್ಣಶಾಸ್ತ್ರೀ, ತೀ.ನಂ.ಶ್ರೀ. ಅವರ ಸಾಲಿನಲ್ಲಿ ಅವರ ಸಹವಾಸದಲ್ಲಿ ಬೆಳೆದು ಬಂದ ಶ್ರೇಷ್ಠ ಮಟ್ಟದ ಸಾಹಿತಿಗಳು. ಕನ್ನಡದಲ್ಲಿ ಲಲಿತ ಪ್ರಬಂಧ ಸಾಹಿತ್ಯಕ್ಕೆ ವಿಶೇಷ ಕೊಡುಗೆ ಸಲ್ಲಿಸಿ ಆ ವಿಭಾಗವನ್ನು ಸಮೃದ್ಧವಾಗಿ ಬೆಳೆಸಿದ್ದಾರೆ. ಚಿತ್ರಗಳು ಪತ್ರಗಳು, ಸಂಜೆಗಣ್ಣಿನ ಹಿನ್ನೋಟ, ಅಪರವಯಸ್ಕನ ಅಮೆರಿಕಾ ಯಾತ್ರೆ, ದೇವರು - ಮುಂತಾದ ಮುಖ್ಯ ಕೃತಿಗಳನ್ನು ಕನ್ನಡಕ್ಕೆ ಕೊಟ್ಟಿದ್ದಾರೆ.

ಶತಾಯುಷಿಗಳಾಗಿ ನಮ್ಮೊಂದಿಗಿರುವ ಪುಣ್ಯವನ್ನು ನಮಗೆ ತಂದುಕೊಟ್ಟಿದ್ದಾರೆ. 103ನೇ ವರ್ಷದಲ್ಲಿ ಮುನ್ನಡೆಯುತ್ತಿರುವಾಗ ಈ ಸಂಚಿಕೆಯನ್ನು ರೂಪಿಸಲಾಗಿತ್ತು. ಆದರೆ ಇದು ಹೊರಬರುವ ಸಮಯದಲ್ಲಿ ಮೂರ್ತಿರಾಯರು ನಮ್ಮೊಂದಿಗಿಲ್ಲ. ಬಿ.ಎಂ.ಶ್ರೀ ಪ್ರತಿಷ್ಠಾನ ಸ್ಥಾಪನೆಯ ದಿನದಿಂದ ಸಂಸ್ಥಾಪಕ ಎಂ.ವಿ.ಸೀತಾರಾಮಯ್ಯನವರು ಮತ್ತು ನಿಟ್ಟೂರು ಶ್ರೀನಿವಾಸರಾಯರ ಸಂಪರ್ಕದಲ್ಲಿದ್ದು ಪ್ರತಿಷ್ಠಾನದ ಬೆಳವಣಿಗೆಗೆ ಅಪಾರವಾಗಿ ಶ್ರಮಿಸಿದ್ದಾರೆ. "ಸಾಹಿತ್ಯ ಮತ್ತು ಸತ್ಯ" ಎಂಬ ವಿದ್ವತ್ ಪೂರ್ಣ ಪುಸ್ತಕ ಬರೆದುಕೊಟ್ಟಿರುವುದಲ್ಲದೆ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿ, ಸಮಿತಿಗಳಲ್ಲಿದ್ದು ಮಾರ್ಗದರ್ಶನ ನೀಡಿ ಪ್ರತಿಷ್ಠಾನಕ್ಕೆ ಶ್ರೇಯಸ್ಸನ್ನು ತಂದಿದ್ದಾರೆ.



# ನಿಟ್ಟೂರು ಶ್ರೀನಿವಾಸ ರಾವ್

ನಿಟ್ಟೂರು ಶ್ರೀನಿವಾಸರಾವ್ ಅವರು 102ನೇ ವರ್ಷದಲ್ಲಿ ಮುನ್ನಡೆಯುತ್ತಿರುವ ಕರ್ನಾಟಕ ಕಂಡ ಶ್ರೇಷ್ಠ ಮುತ್ಸದ್ದಿಗಳಲ್ಲಿ ಒಬ್ಬರು. ಕರ್ನಾಟಕ ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿ, ಕೆಲಕಾಲ ಹಂಗಾಮಿ ರಾಜ್ಯಪಾಲರಾಗಿ, ಕೇಂದ್ರ ಭ್ರಷ್ಟಾಚಾರ ನಿರ್ಮೂಲನಾ ಆಯೋಗದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿರುವ ನಿಟ್ಟೂರರು ಡಿವಿಜಿವರ ಪರಮಾಪ್ತರು. ಅವರ ನಂತರ ಅವರು ಸ್ಥಾಪಿಸಿದ್ದ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ನಿರ್ವಹಣೆ ಹೊತ್ತು ಇಂದಿನವರೆಗೂ ಮುನ್ನಡೆಸಿಕೊಂಡು ಬಂದಿದ್ದಾರೆ.

ಪ್ರತಿಷ್ಠಾನದ ಸ್ಥಾಪಕ ಅಧ್ಯಕ್ಷರಾಗಿ ನಂತರ ಗೌರವ ಅಧ್ಯಕ್ಷರಾಗಿ ಅದರ ಸರ್ವತೋಮುಖ ಬೆಳವಣಿಗೆಯಲ್ಲಿ ಸಹಕರಿಸಿದ್ದಾರೆ. ಅವರ ಹೆಸರೇ ಪ್ರತಿಷ್ಠಾನಕ್ಕೊಂದು ಶಕ್ತಿಯಾಗಿ, ಗೌರವವಾಗಿ ಪ್ರತಿಷ್ಠಾನವನ್ನು ಉನ್ನತ ಸ್ಥಾನದಲ್ಲಿ ಗುರುತಿಸಲು ಸಾಧ್ಯವಾಗಿದೆ. ಪ್ರತಿಷ್ಠಾನದ ಪ್ರತಿಯೊಂದು ಕಾರ್ಯಕ್ರಮಕ್ಕೂ ತಪ್ಪದೆ ಆಗಮಿಸಿ ಅವುಗಳ ಮೌಲ್ಯವನ್ನು ಹೆಚ್ಚಿಸುವ ಮೂಲಕ, ಸೂಕ್ತ ಸಲಹೆ-ಮಾರ್ಗದರ್ಶನ ನೀಡುವ ಮೂಲಕ ಪ್ರತಿಷ್ಠಾನಕ್ಕೊಂದು ಪ್ರತಿಷ್ಠೆಯನ್ನು ತಂದುಕೊಟ್ಟಿದ್ದಾರೆ.

ಜೀವಿತ ಕಾಲದಲ್ಲೇ ಶತಮಾನೋತ್ಸವ ಆಚರಿಸಿಕೊಳ್ಳುತ್ತಿರುವ ಕನ್ನಡದ ಎರಡನೇ ಜೀವಂತ ದಂತಕಥೆ (Live Legend) ಯಾಗಿ ನಿಟ್ಟೂರು ಕರ್ನಾಟಕಕ್ಕೆ ಕೀರ್ತಿ ತಂದುಕೊಟ್ಟಿದ್ದಾರೆ. (ಮೊದಲನೆಯವರು ಎ.ಎನ್. ಮೂರ್ತಿರಾವ್. ಇವರು ಈಚೆಗೆ 104ನೇ ವರ್ಷದಲ್ಲಿ ನಮ್ಮನ್ನಗಲಿದರು.)

ಇವರಿಬ್ಬರ ಈ ವಿಶಿಷ್ಟ ಸಾಧನೆಗಾಗಿ ಪ್ರತಿಷ್ಠಾನ ಈ ಸಂಚಿಕೆಯನ್ನು 'ಎ.ಎನ್. ಮೂರ್ತಿರಾವ್ ಮತ್ತು ನಿಟ್ಟೂರು ಶ್ರೀನಿವಾಸರಾವ್ ಶತಮಾನೋತ್ಸವ ವಿಶೇಷಾಂಕ'ವನ್ನಾಗಿ ಹೊರತರುವ ಮೂಲಕ ತನ್ನ ಗೌರವನ್ನರ್ಪಿಸುತ್ತದೆ. ಈ ಸಂಚಿಕೆ ಜೂನ್‌ನಲ್ಲಿಯೇ ಹೊರಬರಬೇಕಾಗಿದ್ದಿತು. ಮುದ್ರಣಾಲಯದ ತೊಂದರೆಯಿಂದ ಅದು ಸಾಧ್ಯವಾಗದೆ ಇದೀಗ ಡಿಸೆಂಬರ್ ಸಂಚಿಕೆಯನ್ನೂ ಸೇರಿಸಿಕೊಂಡು ಹೊರತರುತ್ತಿದ್ದೇವೆ. ಓದುಗರು ಸಹಕರಿಸಬೇಕಾಗಿ ವಿನಂತಿ.

- ಸಂಪಾದಕವರ್ಗ

# ಪ್ರೊ. ಎ. ಎನ್. ಮೂರ್ತಿರಾವ್

*ಪ್ರೊ|| ಎಲ್.ಎಸ್. ಶೇಷಗಿರಿರಾವ್*

ಪ್ರೊ|| ಎ.ಎನ್. ಮೂರ್ತಿರಾಯರು ಕರ್ನಾಟಕದಲ್ಲಿ ೨೦ನೆಯ ಶತಮಾನದ ಅಪೂರ್ವ ವ್ಯಕ್ತಿಗಳಲ್ಲೊಬ್ಬರು. ೧೦೩ ವರ್ಷ ದಾಟಿ ೧೦೪ನೆಯ ವರ್ಷದಲ್ಲಿ ನಿಧನರಾದ ಅವರು ಕರ್ನಾಟಕದ ಪರಂಪರೆಯನ್ನು ರಕ್ತಗತ ಮಾಡಿಕೊಂಡಿದ್ದರು. ಆಧುನಿಕ ಮನೋಧರ್ಮವನ್ನು ಬೆಳಗಿಸಿದರು. ಎಲ್ಲ ಕಾಲಗಳಿಗೆ ಸಲ್ಲುವ ಮೌಲ್ಯಗಳನ್ನು ನೆಚ್ಚಿದ ಬದುಕನ್ನು ಬಾಳಿದರು.

೧

ಮೂರ್ತಿರಾಯರು ಮೊದಲು ಗಮನ ಸೆಳೆದದ್ದು ಲಲಿತ ಪ್ರಬಂಧ ಪ್ರಕಾರದಲ್ಲಿ. ನವೋದಯ ಯುಗವು ಪಾಶ್ಚಾತ್ಯ ಸಾಹಿತ್ಯದಿಂದ ಹಲವು ಪ್ರಕಾರಗಳನ್ನು ಪಡೆದುಕೊಂಡಿತು. ಇವುಗಳಲ್ಲಿ ಲಲಿತ ಪ್ರಬಂಧವೂ ಒಂದು. ಲಲಿತ ಪ್ರಬಂಧವು ವಿಶಿಷ್ಟ ಮನೋಧರ್ಮವನ್ನು ಬೇಡುತ್ತದೆ. ಪ್ರಬಂಧಕಾರ ಚಿಂತನಶೀಲನಾಗಿರಬೇಕು. ಆದರೆ ಅತಿ ಗಾಂಭೀರ್ಯ ಸಲ್ಲದು. ಲಲಿತ ಪ್ರಬಂಧ ಬರೆಯುವವನು ಓದುಗನೊಡನೆ ಒಂದು ವಿಶಿಷ್ಟ ಸಂಬಂಧವನ್ನು ಸ್ಥಾಪಿಸಬೇಕು. ಪ್ರಬಂಧವನ್ನು ಓದುತ್ತಿದ್ದರೆ ಆತ್ಮೀಯ ಸ್ನೇಹಿತನು ಮಾತನಾಡುತ್ತಿರುವಂತೆ ಎನ್ನಿಸಬೇಕು. ಗೆಳೆಯನು ನಮ್ಮೊಡನೆ ಮಾತನಾಡುವಾಗ ತನ್ನ ಹಿರಿಮೆಯನ್ನು ಪ್ರದರ್ಶಿಸಿ ನಮ್ಮ ಭಕ್ತಿ ಗೌರವಗಳನ್ನು ಗೆಲ್ಲಲು ಪ್ರಯತ್ನಿಸುವುದಿಲ್ಲ. ಆತ್ಮೀಯನಾಗಿ ನಮ್ಮ ಸರಿಸಮಾನವಾಗಿ ಮಾತನಾಡುತ್ತಾನೆ. ಇದು ಲಲಿತ ಪ್ರಬಂಧದ ಧಾಟಿ. ಪ್ರಬಂಧಕಾರ ಓದುಗನ ಮುಂದೆ ತನ್ನ ಮನಸ್ಸನ್ನು ತೆರೆದಿಡುತ್ತಾನೆ. ಆದರೆ ಹಾಗೆ ತೆರೆದಿಟ್ಟಾಗ, 'ಅಯ್ಯೋ, ಇಷ್ಟೆಯೇ ಈ ಮನಸ್ಸಿನ ಭಾಗ್ಯ' ಎನ್ನಿಸಬಾರದು. ಓದು, ಲೋಕಾನುಭವ, ಚಿಂತನೆ ಮೂರು ರೀತಿಗಳಲ್ಲಿಯೂ ಅದು ಶ್ರೀಮಂತ ಮನಸ್ಸಾಗಿರಬೇಕು. ಮೂರ್ತಿರಾಯರದು ಇಂಥ ಮನಸ್ಸು. ಅವರು ರಾಧಾಕೃಷ್ಣನ್ ಅವರ ವಿದ್ಯಾರ್ಥಿ. ತತ್ವಶಾಸ್ತ್ರವನ್ನು ಅಧ್ಯಯನ ಮಾಡಿದವರು. ಕನ್ನಡ, ಇಂಗ್ಲಿಷ್‌ಗಳೊಡನೆ ಫ್ರೆಂಚ್ ಭಾಷೆಯನ್ನು ಕಲಿತವರು. ನಲವತ್ತು ವರ್ಷ ವಯಸ್ಸಾದ ಮೇಲೆ ಸಂಸ್ಕೃತವನ್ನು ಕಲಿತು ಶಾಸ್ತ್ರ ಗ್ರಂಥಗಳನ್ನು ಸಾಹಿತ್ಯವನ್ನು ಪ್ರೀತಿಯಿಂದ ಅಧ್ಯಯನ ಮಾಡಿದವರು. ಹಳ್ಳಿಯ ಜೀವನ, ನಗರ ಜೀವನ ಎರಡನ್ನೂ ಅನುಭವಿಸಿದವರು. ಬಡತನ, ಕಷ್ಟ, ನೆಮ್ಮದಿ ಎಲ್ಲ ಕಂಡವರು. ಸ್ವತಂತ್ರವಾಗಿ ಚಿಂತಿಸುವವರು. ಲಲಿತ ಪ್ರಬಂಧಕ್ಕಾಗಿ ಮೂರ್ತಿರಾಯರು ಹುಟ್ಟಿದರು. ಅವರಿಗಾಗಿ ಲಲಿತ ಪ್ರಬಂಧ ರೂಪ ತಾಳಿತು ಎನ್ನುವಂತಿತ್ತು ಅವರ ಮೊದಲನೆಯ ಪ್ರಬಂಧ ಸಂಕಲನ 'ಹಗಲು ಗನಸುಗಳು' ಆಗಲೇ ತಮ್ಮ ಮಾಧ್ಯಮದ ಮೇಲೆ ಪ್ರಭುತ್ವ ಸಾಧಿಸಿದ ಬರಹಗಾರನ ಕೃತಿ. ವ್ಯಕ್ತಿ ಚಿತ್ರ, ವರ್ಣನೆ, ವೃತ್ತಾಂತ ಎಲ್ಲದರ ಮೇಲೆ ಪ್ರಭುತ್ವವಿರುವ ಬರಹಗಾರನ ಕೃತಿ. ಲವಲವಿಕೆಯ ಭಾಷೆ. ಇಲ್ಲಿಂದ ಪ್ರಾರಂಭವಾದ ಪ್ರಬಂಧ ಬರಹ ಕಾಲು ಶತಮಾನದಲ್ಲಿ ಸೊಗಸಾದ ರಚನೆಗಳನ್ನು ನೀಡಿತು. 'ಗಾಡಿಯ ಪ್ರಯಾಣ'ದಲ್ಲಿ ಮೂರ್ತಿರಾಯರು ಇಂದು ಮರೆಯಾಗಿರುವ, ಆದರೆ ಪ್ರಬಂಧವನ್ನು ಓದಿದ ಮೇಲೆ ನಾವು ಎಂದೂ ಮರೆಯಲಾಗದ ಜಗತ್ತನ್ನು ಸೃಷ್ಟಿಸುತ್ತಾರೆ. 'ಲಲಿತೆಯ ವಿದ್ಯಾಭ್ಯಾಸ', 'ಪ್ರಣಯ ಯಾತ್ರೆ' ನವದಾಂಪತ್ಯದ ಸೊಗಸು, ಖುಷಿಗಳನ್ನು ಕಡೆದಿಟ್ಟಂತಿದೆ. 'ವ್ಯಾಘ್ರಗೀತೆ', ನಮಗೆಲ್ಲ ಪರಿಚಿತವಾದ 'ಗೋವಿನ ಹಾಡಿ'ನ ಮೃದು ಅಣಕ, ಹಾಸ್ಯ ತುಂಬಿ ತುಳುಕುವ ಆದರೆ ಮೂಲದ ವಿಷಯದಲ್ಲಿ ಒಂದಿಷ್ಟು ಲೇವಡಿಯ ನೆರಳಿನ ನೆರಳನ್ನೂ ಸೋಂಕಿಸದ ಬರಹ.

ದಿನನಿತ್ಯದ ಅನುಭವವು ಹೊಸ ಮೆರುಗನ್ನು, ಹೊಸ ಅರ್ಥವನ್ನು ತಳೆಯುವುದನ್ನು ಹೊಸ ಹೊಸ ದೃಷ್ಟಿಗಳನ್ನು ಪಡೆದುಕೊಳ್ಳುವುದನ್ನು 'ಹೋಟಲುಗಳು', 'ಹೆಂಡತಿಯ ಹೆಸರು', 'ದಿವಾನಖಾನೆಯ ಅಂದ ಚೆಂದ', 'ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು', 'ಬೇಡದ ಅತಿಥಿಗಳು', 'ಗಾನ ಪ್ರಪಂಚದ ಅಪೂರ್ಣಪ್ರಜ್ಞರು', 'ನೀಳಕಂಠ' - ನನ್ನ ಮನಸ್ಸನ್ನು ಸೆಳೆದ ಪ್ರಬಂಧಗಳ ಪಟ್ಟಿಯು ಬೆಳೆಯುತ್ತಲೇ ಹೋಗುತ್ತದೆ. 'ದೆವ್ವಗಳು' ಎಂಥ ವಿಶಿಷ್ಟವಾದ ಪ್ರಬಂಧ! ದೆವ್ವದ ಕಥೆಗಳನ್ನು ಕೇಳುವವರು, ಹೇಳುವವರು ಅವರ ಮನೋಧರ್ಮಗಳನ್ನು ಮೃದುವಾಗಿ ಹಾಸ್ಯ ಮಾಡುತ್ತಾ, 'ಮತ್ತೊಂದು ದೆವ್ವದ ಕಥೆ' ಎನ್ನಿಸುವಂತೆ ಒಂದು ಕಥೆಯನ್ನು ಪ್ರಾರಂಭಿಸಿ ಒಂದು ದೆವ್ವದ ವಿಷಯದಲ್ಲಿ ಎಂಥ ಅನುಕಂಪವನ್ನು ಮೂಡಿಸಿ ಬಿಡುತ್ತದೆ! ನಮ್ಮ ನಿತ್ಯದ ಅನುಭವಗಳನ್ನು, ಸುತ್ತಮುತ್ತಲಿನ ಜಗತ್ತನ್ನು ಹೊಸ ರೀತಿಯಲ್ಲಿ ಕಾಣುವಂತೆ ಮನಸ್ಸನ್ನು ರೂಪಿಸುವ ಪ್ರಬಂಧಗಳಿವು. ಎಲ್ಲಿಯೂ ಹಾಸ್ಯ ಒರಟಲ್ಲ, ಎಲ್ಲಿಯೂ ಅನುಕಂಪ ಭಾವಾತಿರೇಕವಲ್ಲ.

ಮೂರ್ತಿರಾಯರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ತಂದುಕೊಟ್ಟ 'ಚಿತ್ರಗಳು, ಪತ್ರಗಳು' ಒಂದು ಅಪೂರ್ವ ಕೃತಿ. ಪುಸ್ತಕದ ಹೆಸರೇ ಹೇಳುವಂತೆ ಇದರಲ್ಲಿ ಎರಡು ಭಾಗಗಳು. ಮೊದಲ ಭಾಗದಲ್ಲಿ ಹನ್ನೆರಡು ವ್ಯಕ್ತಿಚಿತ್ರಗಳು. ವ್ಯಕ್ತಿಯ ಸ್ವರೂಪ, ಉಡುಪು, ಅಭ್ಯಾಸಗಳೊಡನೆ ಆತನ ವ್ಯಕ್ತಿತ್ವವನ್ನು ನಮ್ಮ ಮುಂದೆ ತೆರೆದಿರಿಸುವ ಬರಹಗಳು ಇವು. ಮೂರು ಪುಟಗಳಲ್ಲಿ ರೆವರೆಂಡ್ ಬೂಟರ ವ್ಯಕ್ತಿತ್ವದ ಪರಿಚಯವಾಗುತ್ತದೆ. ಸುಮಾರು ೧೦೦ ಶಬ್ದಗಳಲ್ಲಿ ಅವರ ಪಾಠದ ಪರಿಚಯವಾಗುತ್ತದೆ. ಅವರು ಕಣ್ಣುಮುಂದೆ ನಿಲ್ಲುತ್ತಾರೆ. ಅವರ ಮಾತುಗಳು ಕೇಳುತ್ತವೆ, ಅವರ ಬಲಗೈ ಚಲನೆ ಕಾಣುತ್ತದೆ. ಇವರಿಂದ ಹಿಡಿದು ಸರ್ವೇಪಲ್ಲಿ ರಾಧಾಕೃಷ್ಣನ್‌ರವರೆಗೆ ಎಲ್ಲರನ್ನೂ ಕಾಣಿಸುತ್ತಾರೆ ಮೂರ್ತಿರಾಯರು. ಅವರ ಸ್ವಭಾವವನ್ನು ತೆರೆದಿರಿಸುತ್ತಾರೆ. ಗೌರವ, ಪ್ರೀತಿ ಎಲ್ಲರಿಗೂ ಸಲ್ಲುತ್ತವೆ.

ಮೂರ್ತಿರಾಯರಿಗಾದಂತೆ ಅವರು ನಮಗೂ ಹತ್ತಿರದವರಾಗುತ್ತಾರೆ. ಪ್ರಿನ್ಸಿಪಲ್ ಮೆಕಿಂಟಾಷ್ (ನಾನೂ ಅವರ ವಿದ್ಯಾರ್ಥಿ) ವ್ಯಕ್ತಿತ್ವದ ಮಿತಿಗಳನ್ನೂ ವಿನೋದದ ಅಂಶಗಳನ್ನೂ ಹೇಳುತ್ತಲೇ ನಮಗೆ ಅವರಲ್ಲಿ ಒಂದು ಆತ್ಮೀಯತೆ ಮೂಡುವಂತೆ ಬರೆಯುತ್ತಾರೆ. ಮೂರ್ತಿರಾಯರ ಮೃದು ವಿಮರ್ಶೆ ತೂಕಡಿಸುವುದಿಲ್ಲ. ರಾಧಾಕೃಷ್ಣನ್ ವಿಷಯ ಅತ್ಯಂತ ಗೌರವದಿಂದ, ಮೆಚ್ಚಿಕೆಯಿಂದ, ಅಭಿಮಾನದಿಂದ ಬರೆಯುತ್ತಾರೆ. ಆದರೂ ಒಂದು ಮಾತನ್ನು ಹೇಳುತ್ತಾರೆ (ಅಧ್ಯಾಪಕರೆಲ್ಲಾ ಯೋಚನೆ ಮಾಡಬೇಕಾದ ಸಂಗತಿ) :

"ಬಹುಶಃ ಅವರ ಪ್ರವಚನದ ಲಾಲಿತ್ಯ ಕೆಲವು ವೇಳೆ ದೋಷವಾಗಿ ಪರಿಣಮಿಸುತ್ತಿತ್ತು. ಅವರ ಉಪನ್ಯಾಸವನ್ನು ಕೇಳಿದ ಮೇಲೆ 'ಈ ವಿಷಯ ಸಂಪೂರ್ಣವಾಗಿ ಕರಗತವಾಯಿತು,' ಎನ್ನಿಸುತ್ತಿತ್ತು- ಅವರ ವಾದ ಅಷ್ಟು ತರ್ಕಬದ್ಧವಾದದ್ದು, ವಿವರಣೆ ಅಷ್ಟು ವಿಶದವಾದದ್ದು. ಆದ್ದರಿಂದ 'ಈ ವಿಷಯವನ್ನು ಮತ್ತಷ್ಟು ಪರಿಶೀಲಿಸಬೇಕು;ಈ ವಾದಕ್ಕೆ ಇತರ ಆಕ್ಷೇಪಗಳು ಬರಬಹುದು; ನಾವು ಗಮನಕ್ಕೆ ತಂದುಕೊಳ್ಳದ ಪೂರ್ವಪಕ್ಷಗಳಿರಬಹುದು; ಈ ವಿಷಯವನ್ನು ಕುರಿತ ಇತರ ಗ್ರಂಥಗಳನ್ನು ಓದಬೇಕು' ಎಂಬ ಯೋಚನೆ ಅನೇಕರಲ್ಲಿ ಬೆಳೆಯಲಿಲ್ಲವೇನೊ." (ಮೂರ್ತಿರಾಯರ ಈ ವಾಕ್ಯಗಳ ನಂತರ ಬಹು ಎಚ್ಚರಿಕೆಯಿಂದ 'ನನ್ನ ಅಭಿಪ್ರಾಯ ಸರಿಯೇ

ಎಂಬ ಬಗ್ಗೆ ನನಗೇ ಸಂದೇಹವಿದೆ.........(ತಾವೇ ಸತ್ಯವನ್ನು ಅರಸುವ ಮನೋಧರ್ಮ ಶಿಷ್ಯರಲ್ಲಿ ಬೆಳೆಯದಿದ್ದುದ್ದಕ್ಕೆ 'ಶಿಷ್ಯರೇ ಜವಾಬ್ದಾರರೆನ್ನುವುದೂ ಸಾಧ್ಯ' ಎಂದೂ ಹೇಳುತ್ತಾರೆ)

ಪುಸ್ತಕದ ಎರಡನೆಯ ಭಾಗ ಮೂರ್ತಿರಾಯರು ತೀ.ನಂ.ಶ್ರೀ ಅವರಿಗೆ ಮತ್ತು ಮೂರ್ತಿರಾಯರ ಕುಟುಂಬದವರಿಗೆ ಬರೆದ ಪತ್ರಗಳು. ನಮ್ಮ ದೇಶದಲ್ಲಿ ಪತ್ರ ಸಾಹಿತ್ಯ ಸಾಕಷ್ಟು ಬೆಳೆದಿಲ್ಲ. ಕುಟುಂಬದವರಿಗೆ ಬರೆದ ಪತ್ರಗಳಲ್ಲಿ ಹಿಂದೂ ಧರ್ಮದ ಪರಿಶೀಲನೆ ಇದೆ. ತೀ.ನಂ.ಶ್ರೀ. ಅವರಿಗೆ ಬರೆದ ಪತ್ರಗಳಲ್ಲಿ ವಿಶ್ವವಿದ್ಯಾನಿಲಯದ ಮತ್ತು ಇತರ ಸಂಸ್ಥೆಗಳ ಆಗುಹೋಗುಗಳು, ಸಾಹಿತ್ಯದ ವಿಕಾಸಗಳು ಚರ್ಚಿತವಾಗುತ್ತವೆ. ಪ್ರಬಂಧಕಾರ ಮೂರ್ತಿರಾಯರ ವ್ಯಕ್ತಿತ್ವ ಇಲ್ಲಿ ಬೇರೆ ಮಾಧ್ಯಮಗಳಲ್ಲಿ ತೆರೆದುಕೊಳ್ಳುತ್ತದೆ.

ಕಳೆದ ಅರ್ಧ ಶತಮಾನದ ಕರ್ನಾಟಕ ಸಾಂಸ್ಕೃತಿಕ ಅಧ್ಯಯನ ಮಾಡುವವರಿಗೆ ಇಲ್ಲಿ ಸಾಮಗ್ರಿ ಇದೆ. ಈ ಪುಸ್ತಕವನ್ನು ಓದಿ ಮುಗಿಸಿದಾಗ ಹುಣ್ಣಿಮೆಯ ಬೆಳದಿಂಗಳಿನಲ್ಲಿ ನಿಂತಿದ್ದು ಬಂದಂತೆ, ಸ್ವಚ್ಛ ನದಿಯಲ್ಲಿ ಮಿಂದು ಬಂದಂತೆ ಅನುಭವವಾಗುತ್ತದೆ.

ಮೂರ್ತಿರಾಯರ ಎರಡು ಪ್ರಸಿದ್ಧ ಕೃತಿಗಳು 'ಅಪರ ವಯಸ್ಕನ ಅಮೆರಿಕ ಯಾತ್ರೆ' ಮತ್ತು 'ಸಂಜೆಗಣ್ಣಿನ ಹಿನ್ನೋಟ.' ಮೊದಲನೆಯದು ಹೆಸರೇ ಹೇಳುವಂತೆ ಅಮೆರಿಕಾದಲ್ಲಿ ಅವರ ಅನುಭವಗಳು. (ರಾಯರಿಗೆ ಪ್ರವಾಸ ಎಂದರೆ ಬಹು ಇಷ್ಟ. ವಿದೇಶಿ ಪ್ರವಾಸ ಮೊದಲ ಬಾರಿ ಕೈಗೊಂಡದ್ದೇ ಅರವತ್ತು ದಾಟಿದ ಮೇಲೆ. ಅನಂತರ ಮತ್ತೆ ಮತ್ತೆ ಪ್ರವಾಸ ಹೋಗುತ್ತಿದ್ದರು. 'ನನ್ನ ಕೊನೆಯ ವಿದೇಶಿ ಪ್ರವಾಸ' ಎನ್ನುತ್ತಿದ್ದರು. ನಾನೇ ಅವರನ್ನು ಕೇಳುತ್ತಿದ್ದೆ. "ಎಷ್ಟು ಬಾರಿ ಕೊನೆಯ ಪ್ರವಾಸ ಮಾಡಬೇಕು ಅಂತ ನಿರ್ಧರಿಸಿದ್ದೀರಿ?" ಎಂದು.) ಅಪೂರ್ವ ಪ್ರವಾಸ ಸಾಹಿತ್ಯ ಕೃತಿ. ಇದು ರಾಯರು ಸಂದರ್ಶಿಸಿದ ಸ್ಥಳಗಳ ಪರಿಚಯವನ್ನಷ್ಟೇ ಮಾಡಿಕೊಡುವುದಿಲ್ಲ. ಆ ಸ್ಥಳಗಳೂ ಅವರು ಪರಿಚಯ ಮಾಡಿಕೊಂಡ ವ್ಯಕ್ತಿಗಳೂ ನಮ್ಮ ಕಣ್ಣು ಮುಂದೆ ನಿಲ್ಲುವಂತೆ, ಅವುಗಳ ಅವರ ಸ್ವರೂಪ, ಅವರ ಸ್ವಭಾವ ನಮಗೆ ಮನಗಾಣುವಂತೆ ಪುನರ್ ಸೃಷ್ಟಿಸುತ್ತಾರೆ. ಇದರ ಪರಿಣಾಮವೆಂದರೆ ಪುಸ್ತಕವನ್ನು ಓದಿ ಮುಗಿಸುವ ಹೊತ್ತಿಗೆ ಆ ಸ್ಥಳಗಳ ವ್ಯಕ್ತಿಗಳೂ ಅಮೆರಿಕ ಮೂರ್ತಭಾಗಗಳಾಗಿ, ಅಮೆರಿಕಾ ಬದುಕು-ಸಂಸ್ಕೃತಿಗಳ ಸೂಚಕಗಳಾಗಿ, ಆ ದೇಶದ ಬದುಕಿನ ವೈಖರಿ- ಸಂಸ್ಕೃತಗಳು ನಮಗೆ ಅನುಭವವಾಗುತ್ತವೆ. ಇದನ್ನೇ ಬೇರೆಯ ಮಾತುಗಳಲ್ಲಿ ಹೇಳುವುದಾದರೆ, ಮೂರ್ತಿರಾಯರು ಅಮೆರಿಕಾದ ಬದುಕಿನ ಶೈಲಿ-ಸಂಸ್ಕೃತಿಗಳನ್ನು ಕುರಿತು ನೇರವಾಗಿ ತನ್ನ ಅಭಿಪ್ರಾಯಗಳನ್ನು ಹೇಳುವುದಷ್ಟೇ ಅಲ್ಲ, ಅವನ್ನು ನಮ್ಮ ಅನುಭವಕ್ಕೆ ತಂದುಕೊಡುತ್ತಾರೆ. ಕೃತಿಯು ಮನುಷ್ಯ ಸ್ವಭಾವವನ್ನು ಪರಿಚಯ ಮಾಡಿಕೊಡುತ್ತದೆ. ಜೊತೆಗೆ ಎರಡು ಸಂಸ್ಕೃತಿಗಳನ್ನು ಪಕ್ಕಪಕ್ಕದಲ್ಲಿಟ್ಟು ನೋಡುವ ಅಧ್ಯಯನವೂ ಆಗುತ್ತದೆ. ರಾಯರಿಗೆ ಭಾರತ ಸಂಸ್ಕೃತಿಯಲ್ಲಿ ಆಳವಾದ ಅಭಿಮಾನ, ಆದರೆ ಎಚ್ಚೆತ್ತಿರುವ ವಿಮರ್ಶಾಪ್ರಜ್ಞೆ ಮಾರ್ಗದರ್ಶನ ಮಾಡುವ ಅಭಿಮಾನ. ಇತರ ದೇಶಗಳ ಸಂಸ್ಕೃತಿಯಲ್ಲಿ ಕುತೂಹಲ. ಅದು ತಮ್ಮ ಕಣ್ಣನ್ನು ಕೋರೈಸದಂತೆ ಎಚ್ಚರಿಕೆ ಸದಾ ಇರುತ್ತದೆ. ಅದರ ವಿಷಯದಲ್ಲಿಯೂ ತೆರೆದ ಮನಸ್ಸು. ಭಾರತದಲ್ಲಿ ಮಗುವಿನ ಹುಟ್ಟುಹಬ್ಬವನ್ನು ಆಚರಿಸುವ ರೀತಿ, ಅಮೆರಿಕಾದಲ್ಲಿ ಭಾರತೀಯರೇ ಆಚರಿಸುವ ರೀತಿ ಇವನ್ನು ಪಕ್ಕಪಕ್ಕದಲ್ಲಿಟ್ಟು ನೋಡುತ್ತಲೇ, ಅಮೆರಿಕದ ಆಚರಣೆಯ ಬಗ್ಗೆ ತಮ್ಮ ಅತೃಪ್ತಿಯನ್ನು ಸೂಚಿಸುತ್ತಲೇ '(ಅಮೆರಿಕದ) ಇವರೊಬ್ಬರಿಗೂ

ಸೌಂದರ್ಯದ ಸ್ವರೂಪ ತಿಳಿಯದು. ಇಲ್ಲಿ ನಡೆಯುತ್ತಿರುವುದೆಲ್ಲ ಕೃತಕ ಎಂದು ಯಾವ ಧೈರ್ಯದಿಂದ ಹೇಳಲಿ!' ಎನ್ನುತ್ತಾರೆ.

'ಸಂಜೆಗಣ್ಣಿನ ಹಿನ್ನೋಟ' ಒಂದು ಸುಸಂಸ್ಕೃತ ಚೇತನ ಬದುಕಿಗೆ ಸ್ಪಂದಿಸಿದ ರೀತಿ, ಅದರ ವಿಕಸನ ಇವುಗಳ ದಾಖಲೆ, ಜೊತೆಗೇ ಹಳೆಯ ಮೈಸೂರಿನ ಸುಮಾರು ಒಂದು ಶತಮಾನದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕುಗಳ ಕನ್ನಡಿ. ಕಳೆದ ಶತಮಾನದ ಕನ್ನಡದ ನಾಡಿನ ಸಂಸ್ಕೃತಿಯನ್ನು ಅಧ್ಯಯನ ಮಾಡುವವರಿಗೆ ಇದೊಂದು ಗಣಿ. ಮೂರ್ತಿರಾಯರು ಪರಿಪಕ್ವತೆಗೆ ಇನ್ನೊಂದು ಹೆಸರು. ಅವರ ಹಾಸ್ಯಪ್ರಜ್ಞೆ ಅತ್ಯಂತ ಆರೋಗ್ಯಕರವಾದುದು. ಈ ಎರಡು ಕಾರಣಗಳಿಂದ ಅವರ ಆತ್ಮಚರಿತ್ರೆಯಲ್ಲಿ ಅಹಂಭಾವದ ನೆರಳು ಸುಳಿಯುವುದಿಲ್ಲ. ತಮ್ಮ ಅಭಿಪ್ರಾಯಗಳನ್ನೂ ಕಾರ್ಯಗಳನ್ನೂ ಸಮರ್ಥಿಸಿಕೊಳ್ಳುವ ಆತ್ಮವೃತ್ತವಲ್ಲ ಇದು. ಮತ್ತೆ ಮತ್ತೆ ಆತ್ಮವಿಮರ್ಶೆಗೆ ಎಳಸುವ ಆತ್ಮವೃತ್ತ. ತಾವು ನೆಚ್ಚಿದ ಮೌಲ್ಯಗಳನ್ನು ಅನುಭವದ ಪರೀಕ್ಷೆಗೆ ಒಡ್ಡುವ ಆತ್ಮವೃತ್ತ.

ಮೂರ್ತಿರಾಯರ ಬಹು ಪ್ರಸಿದ್ಧ ಕೃತಿ 'ದೇವರು'. ಅವರಿಗೆ ಪಂಪ ಪ್ರಶಸ್ತಿಯನ್ನು ಈ ಕೃತಿ ತಂದುಕೊಟ್ಟಿತು. ಯುವ ಓದುಗರನ್ನೂ ಆಕರ್ಷಿಸಿದ ಪುಸ್ತಕ ಇದು. ಮೂರ್ತಿರಾಯರು ನಾಸ್ತಿಕರು - ಆದರೆ ವಿಷಾದದಿಂದ, ಇಷ್ಟವಿಲ್ಲದೆ ನಾಸ್ತಿಕರಾದವರು. ಮನುಕುಲ ದೇವರನ್ನು ಬಯಸುತ್ತದೆ. ಆದರೆ ಮನುಷ್ಯ ಒಪ್ಪಿ ಪೂಜಿಸಬಹುದಾದ ದೇವರು ಇಲ್ಲ ಎನ್ನುವುದು ಅವರ ಪ್ರತಿಪಾದನೆ. ದೇವರು ಸರ್ವಜ್ಞ, ಸರ್ವಶಕ್ತ, ಕರಣಾಸಿಧಿ ಆದರೆ ಬದುಕಿನಲ್ಲಿ ಇಷ್ಟೊಂದು ಕಷ್ಟ, ನೋವು ಇರುವುದೇಕೆ? ಈ ಪುಸ್ತಕದಲ್ಲಿ ಅವರು ಮನುಷ್ಯನ ಇತಿಹಾಸದಲ್ಲಿ ದೇವರ ಪರಿಕಲ್ಪನೆಯನ್ನು ವಿಶ್ಲೇಷಿಸುತ್ತಾರೆ, ಹಲವು ದೃಷ್ಟಿಕೋನಗಳನ್ನು ವಿಶ್ಲೇಷಿಸುತ್ತಾರೆ. ನಾನು ಮೆಚ್ಚಿಕೊಂಡರೂ ಸಂಪೂರ್ಣವಾಗಿ ಒಪ್ಪಿಕೊಳ್ಳದ ಕೃತಿ ಇದು. ಪುಸ್ತಕವನ್ನು ವಿವರವಾಗಿ ವಿಶ್ಲೇಷಿಸುವ ಸಂದರ್ಭ ಇದಲ್ಲ. ಆದರೆ ಒಂದೆರಡು ಮಾತುಗಳನ್ನು ಹೇಳಬೇಕು. ರಾಯರು ತಮ್ಮದು ವೈಜ್ಞಾನಿಕ ಮನೋಧರ್ಮ ಎನ್ನುತ್ತಾರೆ. 'ಪ್ರಯೋಗ-ವೀಕ್ಷಣೆ-ನಿರ್ಣಯ' ಇದು ವಿಜ್ಞಾನದ ಮಾರ್ಗ ಎನ್ನುತ್ತಾರೆ. ಆದರೆ ಅವರು ನ್ಯೂಟನ್‌ನ ಭೌತವಿಜ್ಞಾನದ ನಂತರ, ಆತನ ಮಾರ್ಗದೊಂದಿಗೆ, ವಿಜ್ಞಾನವು ಸ್ವೀಕರಿಸಿರುವ ಇತರ ವಿಧಾನಗಳನ್ನು ನಿರ್ಣಯಗಳನ್ನು ಗಮನಿಸುದಿಲ್ಲ, ರಮಣ ಮಹರ್ಷಿಗಳು, ರಾಮಕೃಷ್ಣ ಪರಮಹಂಸರು, ಕ್ರೈಸ್ತ ಮತ್ತು ಸೂಫಿ ಅನುಭಾವಿಗಳು ಇವರ ಅನುಭವಗಳನ್ನು ಗಮನಿಸುವುದಿಲ್ಲ. ಇದನ್ನು ಹೇಳಿಯೂ ನಾನು, 'ದೇವರು' ಪುಸ್ತಕವನ್ನು ಓದುವುದು ಒಂದು ವಿಶಿಷ್ಟ ಅನುಭವ, ಅದರಲ್ಲಿನ ವಿದ್ವತ್ತು, ತರ್ಕದ ಸೊಗಸು, ಬದುಕಿನ ಪ್ರೀತಿ, ಬದುಕು ನೋವು-ಅನ್ಯಾಯಗಳಿಂದ ಮುಕ್ತವಾಗಿರಬೇಕೆಂಬ ಕಳಕಳಿ ಇವು ಅದನ್ನು ಒಂದು ಅಪೂರ್ವ ಕೃತಿಯನ್ನಾಗಿಸಿದೆ ಎಂದು ಹೇಳಬೇಕು.

ಮೂರ್ತಿರಾಯರು ಕನ್ನಡಕ್ಕೆ ಕಾವ್ಯಮೀಮಾಂಸೆಯನ್ನೂ, ಸಾಹಿತ್ಯ ವಿಮರ್ಶೆಯನ್ನೂ, ವಿಚಾರ ಪ್ರಬಂಧಗಳನ್ನೂ ಕೊಟ್ಟಿದ್ದಾರೆ. 'ಪೂರ್ವ ಸೂರಿಗಳೊಡನೆ' ಗ್ರಂಥದಲ್ಲಿ ಸೀತಾ ವನವಾಸ ಪ್ರಸಂಗವನ್ನು ಬೇರೆ ಬೇರೆ ಕವಿಗಳು ನಿರೂಪಿಸಿರುವ ವಿಶಿಷ್ಟ ರೀತಿಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿದ್ದಾರೆ. 'ಷೇಕ್ಸ್‌ಪಿಯರ್' (ಮೊದಲನೆಯ ಭಾಗ) ಆ ಉದ್ದಾಮ ನಾಟಕಕಾರನ ಕೆಲವು ನಾಟಕಗಳನ್ನು ಸಮರ್ಥವಾಗಿ ವಿಶ್ಲೇಷಿಸುತ್ತದೆ. (ಮೂರ್ತಿರಾಯರು ಎರಡನೇ ಭಾಗವನ್ನು

ಬರೆಯಲೇ ಇಲ್ಲ.) ಅವರು ಯಾವ ಕೃತಿಯನ್ನು ವಿಮರ್ಶಿಸಲಿ, ವಸ್ತುವನ್ನು ಆರಿಸಲಿ ಪಂಕ್ತಿ ಪಂಕ್ತಿಯನ್ನು ಎಚ್ಚರಿಕೆಯಿಂದ ಓದುವ ಹೊಣೆಗಾರಿಕೆ ಕಾಣುತ್ತದೆ. ಸೂಕ್ಷ್ಮವಾದ ವಿಶ್ಲೇಷಣೆ ಕಾಣುತ್ತದೆ. ಜೊತೆಗೆ ಸಾರ್ಥಕ ಬದುಕಿನ ಮೌಲ್ಯಗಳ ಸ್ಪಷ್ಟಕಲ್ಪನೆಯ ಬೆಳಕಿನಲ್ಲಿ ಅವರು ಕೃತಿಯ ಮೌಲ್ಯ ಮಾಪನ ಮಾಡುತ್ತಾರೆ. 'ಸಾಹಿತ್ಯ ಮತ್ತು ಸತ್ಯ' ಅವರ ಒಂದು ವಿಮರ್ಶಾ ಗ್ರಂಥ. ಪುಸ್ತಕಕ್ಕೆ ಹೆಸರು ಕೊಟ್ಟ ಲೇಖನ ಅವರು ನೀಡಿದ ಒಂದು ಉಪನ್ಯಾಸದ ಲಿಖಿತ ರೂಪ. ಆ ಉಪನ್ಯಾಸದಂದು ನಾನೂ ಹೋಗಿದ್ದೆ. ಅದೊಂದು ಇಂದ್ರಜಾಲ. ಒಂದು ಅಂಶವನ್ನು ಪ್ರತಿಪಾದಿಸಿ, ಅನಂತರ ಇನ್ನೊಂದನ್ನು ಪ್ರತಿಪಾದಿಸಿ, ಅನಂತರ ಮತ್ತೊಂದನ್ನು ಪ್ರತಿಪಾದಿಸಿ, ಇವುಗಳೆಲ್ಲವನ್ನೂ ಹೊಂದಾಣಿಕೆ ಮಾಡಿ ಒಂದು ನಿರ್ಣಯಕ್ಕೆ ಬಂದು, ಇದೇ ಪ್ರಕ್ರಿಯೆಯನ್ನು ಮುಂದುವರೆಸಿ ಹಲವು ನಿರ್ಣಯಗಳನ್ನು ತಲುಪಿ, ಅನಂತರ ಇವುಗಳನ್ನೆಲ್ಲ ಹೆಣೆದು ಮತ್ತೊಂದು ನಿರ್ಣಯ ಮುಟ್ಟಿ ಮತ್ತೆ ಪ್ರಕ್ರಿಯೆಯನ್ನು ಮುಂದುವರಿಸಿದ ರೀತಿ ಅದ್ಭುತವಾಗಿತ್ತು. ಪೌರ್ವಾತ್ಯ, ಪಾಶ್ಚಾತ್ಯ ಕಾವ್ಯ ಮೀಮಾಂಸೆಗಳ ಹೊಂದಾಣಿಕೆ ಅವರ ಕಾರ್ಯ ಮೀಮಾಂಸೆಯಲ್ಲಿ, ಸಾಹಿತ್ಯ ವಿಮರ್ಶೆಯಲ್ಲಿ ಕಾಣುತ್ತಿತ್ತು.

ಈ ಎಲ್ಲ ಬರಹಗಳಲ್ಲಿ ಕಾಣುವ ಒಂದು ಗುಣ, ಸ್ವೋಪಜ್ಞತೆ ಯಾವ ವಿಷಯವನ್ನೇ ತೆಗೆದುಕೊಳ್ಳಲಿ ಹೊಸತೊಂದು ದೃಷ್ಟಿಯನ್ನು ನಮಗೆ ತಂದುಕೊಡುತ್ತಾರೆ. ಎಷ್ಟೇ ಪರಿಚಿತ ವಿಷಯವಾದರೂ ಮೂರ್ತಿರಾಯರು ಅದನ್ನು ವಿಶ್ಲೇಷಿಸಿದರೆ ಹೊಸತು ಆಯಾಮ ಒಂದು ಲಭ್ಯವಾಗಿರುತ್ತದೆ. ಗಾಂಧೀಜಿಯನ್ನು ಕುರಿತ ಪ್ರಬಂಧ ಒಂದು ಉದಾಹರಣೆ. ಮಹಾಭಾರತವನ್ನು ಕುರಿತು ಮಾತನಾಡಲು ಆಹ್ವಾನ ಬಂದಾಗ ಅವರು ಆರಿಸಿಕೊಂಡಿದ್ದು 'ಮಹಾಭಾರತದಲ್ಲಿ ದುಷ್ಟತನ' ಎನ್ನುವ ವಿಷಯ. ಇಡೀ ಪ್ರಬಂಧ ಮತ್ತೆ ಮತ್ತೆ ಓದಿ ಯೋಚಿಸಬೇಕಾದದ್ದು. ಅದರ ಮುಕ್ತಾಯ ನಮ್ಮ ಸ್ವೀಕೃತ ಅಭಿಪ್ರಾಯವನ್ನು ಕೆಣಕುವಂಥದ್ದು. ಅವರು ಹೇಳುತ್ತಾರೆ : ಮಹಾಭಾರತದಲ್ಲಿ ಸ್ಪಷ್ಟ ದೃಷ್ಟಿಯ ವಾಸ್ತವತೆ ಇದೆ. ಬದುಕಿನ ವಾಸ್ತವತೆಗೆ ಒಂದಿಷ್ಟು ಮುಸುಕು ಹಾಕುವ, ಹೊಳಪಿನ ಬಣ್ಣ ಹಾಕುವ ಪ್ರಯತ್ನ ಇಲ್ಲಿಲ್ಲ. ಈ ಕೃತಿಯನ್ನು ಓದಿದ ಮೇಲೆ ಎನ್ನಿಸುವುದು - ಧರ್ಮಕ್ಕೆ ವಿಜಯವಾಗುತ್ತದೆ, ನಾವು ಅದಕ್ಕಾಗಿ ಶ್ರಮಿಸಿದರೆ. ಧರ್ಮಕ್ಕೆ ದೈವ ಚಿತ್ತ ವಿಜಯವನ್ನು ತಂದುಕೊಡುವುದಿಲ್ಲ. ನಾವೇ ವಿಜಯವನ್ನು ಧರ್ಮಕ್ಕೆ ತಂದುಕೊಡಬೇಕು. ಗೀತಾಚಾರ್ಯನು 'ಯೋಗಕ್ಷೇಮಮ್ ವಹಾಮ್ಯಹಂ' ( ನಾನು ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತೇನೆ) - ಎಂದು ಹೇಳಿದ. ನಾವು ಅವನಿಗೆ ಹೇಳಬೇಕು, 'ಯೋಗಕ್ಷೇಮಮ್ ವಹೋಮಿ ಅಹಂ' (ನಾನೇ ನನ್ನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತೇನೆ).

ಮೂರ್ತಿರಾಯರು ಶ್ರೇಷ್ಠ ಅನುವಾದಕರು. ಕಾರಂತರ 'ಮರುಳಿಮಣ್ಣಿಗೆ' ಯನ್ನು ಇಂಗ್ಲಿಷಿಗೆ ಅನುವಾದಿಸಿದರು. (ದುರದೃಷ್ಟದಿಂದ ಹಲವಾರು ಅಚ್ಚಿನ ದೋಷಗಳು ಉಳಿದು, ಅವರು ಬೇಸರ ಪಟ್ಟುಕೊಳ್ಳುವಂತಾಯಿತು) ಹಲವು ಕಥೆಗಳನ್ನೂ 'ಕೋರಲ್ ಐಲೆಂಡ್ಸ್' ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸಿದರು. ಇಳಿವಯಸ್ಸಿನಲ್ಲಿ ಷೇಕ್ಸ್‌ಪಿಯರ್‌ನ 'ದ ಟೆಂಪೆಸ್ಟ್' ನಾಟಕವನ್ನು ದೀರ್ಘ ಮುನ್ನುಡಿಯೊಡನೆ ಕನ್ನಡಕ್ಕೆ ಸೊಗಸಾಗಿ ಅನುವಾದಿಸಿದರು. ಎರಡು ಭಾಷೆಗಳ ಮೇಲೂ ಅವರ ಪ್ರಭುತ್ವ ಅನನ್ಯವಾದದ್ದು. ಅವರು ಸೂಕ್ಷ್ಮ ಸಂವೇದನೆಯ ಓದುಗರು ಅವರ ಅನುವಾದಗಳು ಅತ್ಯಂತ ಯಶಸ್ವಿಯಾದದ್ದು ಆಶ್ಚರ್ಯವಲ್ಲ ( The River of Silence ಎನ್ನುವುದನ್ನು ಎಂದು 'ಮೌನವತಿ' ಅನುವಾದಿಸಿದವರು ಅವರು.)

೨

ಮೂರ್ತಿರಾಯರ ಎಲ್ಲ ಬರಹದಲ್ಲಿ ಕಾಣುವುದು ಪರಿಪಕ್ವತೆ. ಪರಿಪಕ್ವತೆಯ ಲಕ್ಷಣಗಳು ಯಾವುದೇ ವಿಷಯವನ್ನು ಹಲವು ದೃಷ್ಟಿಕೋನಗಳಿಂದ ಕಾಣುವುದು. 'ನಾನೂ ತಪ್ಪು ಮಾಡಬಹುದು' ಎನ್ನುವ ಅರಿವನ್ನಿಟ್ಟುಕೊಂಡು ಅತಿ ಖಡಾಖಂಡಿತವಾಗಿ 'ಇದಮಿತ್ಥಂ' ಎಂದು ಸಾರಲು ಹೋಗದಿರುವುದು, ತರ್ಕ ಮತ್ತು ಅಂತಃಕರಣ ಎರಡಕ್ಕೂ ಮಹತ್ವ ನೀಡುವುದು ಬದುಕಿನ ಪ್ರೀತಿ ಮೊದಲಾದವು. ಇವೆಲ್ಲ ಅವರ ಸಾಹಿತ್ಯದ ಲಕ್ಷಣಗಳು. ಜೊತೆಗೆ, ಬದುಕಿನ ಚೆಲುವಿಗೆ ಸ್ಪಂದಿಸುವ ಮನಸ್ಸು, ಇಲ್ಲಿನ ಸಂತೋಷವನ್ನೆಲ್ಲಾ ಅನುಭವಿಸುವ ಬಯಕೆ, ಸೂಕ್ಷ್ಮವಾದ ಹಾಸ್ಯದ ಮನಸ್ಸು, ಇವುಗಳಿಂದಲೇ ಅವರು ಪ್ರಬಂಧದ ಸಾಧ್ಯತೆಯನ್ನು ವಿಸ್ತರಿಸಲು ಸಾಧ್ಯವಾದದ್ದು. ವಿದ್ವತ್ತು, ತರ್ಕ, ಅಂತಃಕರಣ ಇವುಗಳ ತ್ರಿವೇಣಿ ಸಂಗಮ ಅವರ ಸಾಹಿತ್ಯ. 'ದಿವಾನಖಾನೆಯ ಅಂದಚೆಂದ' ದಂಥ ಸರಳ ಪ್ರಬಂಧದಿಂದ ಹಿಡಿದು ಮಹಾಭಾರತದ ಮೇಲಿನ ಪ್ರಬಂಧದವರೆಗೆ ಅವರ ಎಲ್ಲ ಪ್ರಬಂಧಗಳಲ್ಲಿ ಕಾಣುವುದು ಬದುಕಿನಲ್ಲಿ ಗಂಭೀರವಾದ ಶ್ರದ್ಧೆ, ಉಪದೇಶ ಮಾಡುವ ಹಂಬಲವಿಲ್ಲದೆ ಓದುಗನನ್ನು ಮೌಲ್ಯದ ಅನ್ವೇಷಣೆಯಲ್ಲಿ ಸಹ-ಪ್ರಯಾಣಿಕನನ್ನಾಗಿ ಕರೆದೊಯ್ಯುವ ಬರಹ ರೀತಿ ಪರಂಪರೆಯಲ್ಲಿ ಗೌರವವನ್ನಿಟ್ಟುಕೊಂಡು ಸಮಕಾಲೀನ ಬದುಕಿಗೆ ಮನಸ್ಸನ್ನು ತೆರೆದುಕೊಂಡು ಸ್ವತಂತ್ರವಾಗಿ ಬದುಕಿನ ಅರ್ಥ, ಚೆಲುವು, ಸಂತೋಷಗಳನ್ನು ಗುರುತಿಸುವ ಮನಸ್ಸು. ಸರಳವಾದ ಆದರೆ ಬರಹದ ಎಲ್ಲ ಅಗತ್ಯಗಳಿಗೆ ವರ್ಣನೆ, ವೃತ್ತಾಂತ, ಜಿಜ್ಞಾಸೆ, ವಿವರಣೆ, ಗಾಢ ಚಿಂತನೆ ಎಲ್ಲಕ್ಕೂ ಹೊಂದಿಕೊಳ್ಳುವ ಕನ್ನಡ ಶೈಲಿ ಮೂರ್ತಿರಾಯರಿಗೆ ಮೊದಲಿನಿಂದ ಸಿದ್ಧಿಸಿತ್ತು. ನಿರ್ಮಲ ಹಾಸ್ಯವು ಅದರಲ್ಲಿ ಹಾಸುಹೊಕ್ಕಾಗಿ ಅವರ ಬರಹಕ್ಕೆ ಲವಲವಿಕೆಯನ್ನು ತಂದುಕೊಟ್ಟಿತು.

೩

ಮೂರ್ತಿರಾಯರ ವ್ಯಕ್ತಿತ್ವ ಬಹಳ ಹಿರಿದಾದದ್ದು. ಅವರ ಗೆಳೆಯರ ಬಳಗದಲ್ಲಿ ಎಲ್ಲ ವಯಸ್ಸಿನವರೂ ಇದ್ದರು. ಯುವ ಜನರು ಅವರ ಭಾಷಣಗಳಿಗೆ, ಸಂವಾದಗಳಿಗೆ ಕಿಕ್ಕಿರಿಯುತ್ತಿದ್ದರು.

ಮೂರ್ತಿರಾಯರ ಮೊದಲನೆಯ ಕೃತಿ 'ಸಾಕ್ರೆಟೀಸ್‌ನ ಕೊನೆಯ ದಿನಗಳು' ಕಡೆಯಲ್ಲಿ ಮುಗಿಸದಿದ್ದ ಬರಹ ಈಶಾವಾಸ್ಯ ಉಪನಿಷತ್ತನ್ನು ಕುರಿತದ್ದು. ಇದು ಅರ್ಥವತ್ತಾದದ್ದು ಎಂದು ನಾನು ಭಾವಿಸುತ್ತೇನೆ. ಸಾಕ್ರೆಟೀಸನಂತೆ ಎಲ್ಲವನ್ನೂ ಶ್ರದ್ಧೆಯಿಂದ ಸತ್ಯಾನ್ವೇಷಣೆಗಾಗಿ ಪ್ರಶ್ನಿಸುವ ಮನಸ್ಸು ಅವರದು. ಪರಂಪರೆಯಲ್ಲಿ ಗೌರವ, ಅದನ್ನೂ ತೆರೆದ ಮನಸ್ಸಿನಿಂದ ಅಧ್ಯಯನ ಮಾಡಿ ಇಂದಿನ ಬದುಕಿಗೆ ಎಂದೂ ಬದುಕಿಗೆ ಮೌಲಿಕವಾದದ್ದನ್ನು ತುಂಬಿಕೊಳ್ಳುವ ಮನಸ್ಸು ಅವರದು. ಅವರೊಡನೆ ಇದ್ದಾಗ ವಯಸ್ಸಿನ ಅಂತರ ಮರೆತು ಹೋಗುತ್ತಿತ್ತು. ಎಷ್ಟೇ ಬಲವಾಗಿಯಾದರೂ ಅವರ ಅಭಿಪ್ರಾಯವನ್ನು ವಿರೋಧಿಸಿ ವಾದ ಮಾಡಬಹುದಾಗಿತ್ತು. ಬದುಕಿನಲ್ಲಿ ನಿರ್ಮಲ ಸಂತೋಷವನ್ನು ಸವಿಯುವ ಮನೋಭಾವ ಅವರದು. ಅವರೇ (ಸ್ವಭಾವದಲ್ಲಿ ಹಲವು ರೀತಿಗಳಲ್ಲಿ ಅವರಂತೆಯೇ ಇದ್ದ) ಡಿ.ವಿ.ಜಿ.ಅವರೊಂದಿಗೆ ನಡೆದ ಒಂದು ಸಂಭಾಷಣೆಯನ್ನು ಸ್ಮರಿಸಿಕೊಂಡಿದ್ದಾರೆ. ಒಮ್ಮೆ ಡಿ.ವಿ.ಜಿ. ತಮ್ಮ ಮನೆಯಲ್ಲಿ ಮಾಡಿದ ಕೋಡುಬಳೆ ರುಚಿ ಇಲ್ಲ ಎಂದು ಟೀಕಿಸಿ "ಎಂಥ ಸಣ್ಣ ವಿಷಯಗಳಿಗೆಲ್ಲ ತಲೆ ಕೆಡಿಸಿಕೊಳ್ಳುತ್ತಾನೆ

ಈ ಮುದುಕ ಎನ್ನಿಸುತ್ತೋ ನಿಮಗೆ?" ಎಂದು ಕೇಳಿದರು. ಮೂರ್ತಿರಾಯರು ಉತ್ತರಿಸಿದರು "ಎಲ್ಲಾದರೂ ಉಂಟೆ ಸಾರ್? ಕೋಡು ಬಳೆ. ಚಕ್ಕುಲಿ, ಮುಚ್ಚೋರೆ, ಹೀರೇಕಾಯಿ- ಬೋಂಡ ಇವನ್ನೆಲ್ಲ 'ಸಣ್ಣ ವಿಷಯ' ಅಂದರೆ ನಾನು ಒಪ್ಪಲಾರೆ. ಇವುಗಳ ವಿಷಯದಲ್ಲಿ ನನಗೆ ರೆವರೆನ್ಸ್ (reverence)!" (ಡಿ.ವಿ.ಜಿ You are a man after my own heart!' ಎಂದರಂತೆ) ಇದೇ ಮೂರ್ತಿರಾಯರು ಸಂಗೀತವನ್ನು (ಕರ್ನಾಟಕ, ಹಿಂದೂಸ್ಥಾನಿ ಎರಡೂ ಶೈಲಿಗಳ ಸಂಗೀತವನ್ನು) ಅದರ ಒಳಹೊಕ್ಕು ಸವಿಯಬಲ್ಲವರು. ಇದೇ ಮೂರ್ತಿರಾಯರು ಕಾಳಿದಾಸನನ್ನು, ಷೇಕ್ಸ್‌ಪೀಯರನನ್ನು ಕುರಿತು ಒಳ ನೋಟಗಳನ್ನು ಕೊಡಬಲ್ಲರು. ಮೊಮ್ಮಗಳ, ಮರಿಮಕ್ಕಳ ಸಹವಾಸದಲ್ಲಿ ಖುಷಿ ಪಡಬಲ್ಲರು. ಗೇರುಸೊಪ್ಪ ಜಲಪಾತದ ಸನ್ನಿಧಿಯಲ್ಲಿ ಮೈಮರೆಯಬಲ್ಲರು.

೧೦೪ನೇ ವರ್ಷದಲ್ಲಿ ಈ ಜಗತ್ತಿನಿಂದ ಮರೆಯಾದ ಮೂರ್ತಿರಾಯರು ಕಡೆಯವರೆಗೆ ಲವಲವಿಕೆಯಿಂದಿದ್ದರು. ಬದುಕನ್ನು ಪ್ರೀತಿಸುತ್ತಿದ್ದರು. ಅವರು ಪರಿಪಕ್ವತೆಯ ಮೂರ್ತಿರಾಯರು.

■



# ನಗೆಮೊಗದ ನಿಟ್ಟೂರು

*- ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರೀ*

ಯಾವುದಾದರೊಂದು ಕ್ರಿಯಾಕ್ಷೇತ್ರದಲ್ಲಿ ಅಸಾಮಾನ್ಯವಾಗಿ ಸಾಧನೆ ಮಾಡಿ, ಅಪಾರ ಜನಪ್ರಿಯತೆ ಗಳಿಸಿ, ವಿಸ್ಮಯಮೂರ್ತಿಗಳಾಗಿ ಕಂಡುಬರುವವರನ್ನು ಉದ್ದೇಶಿಸಿ 'ಜೀವಂತ ಐತಿಹ್ಯ' (Living Legend) ಎಂಬುದಾಗಿ ನಾವು ಹೇಳುವುದುಂಟು. ಆದರೆ ಎದ್ದುಕಾಣುವ ಸಾಧನೆ ಎಂದು ಏನನ್ನಾದರೂ ಖಚಿತವಾಗಿ ಎತ್ತಿಹೇಳಲು ಸಾಧ್ಯವಾಗದ ಸಂದರ್ಭವಿದ್ದೂ ಡಾ|| ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾಯರನ್ನು ನಾವು ಹಾಗೆ ಕರೆಯಲು ಸಾಧ್ಯವಿದೆ ಎನ್ನುವುದೀಗ ಒಂದು ವಿಶೇಷ, ಒಂದು ವಿಸ್ಮಯ.

ನಿಟ್ಟೂರರ ಘನತರವಾದ ಸಾಧನೆ ಎಂದರೆ, ಅವರ ಅನಿತರ ಸಾಧಾರಣವಾದ ಸಾತ್ತ್ವಿಕ ವ್ಯಕ್ತಿತ್ವ. ಆ ವ್ಯಕ್ತಿತ್ವಸೌಭಾಗ್ಯದಿಂದ ಅವರು ಅಪಾರಜನಪ್ರಿಯತೆ ಗಳಿಸಿದ್ದಾರೆ, ವಿಸ್ಮಯಮೂರ್ತಿಗಳೇ ಆಗಿದ್ದಾರೆ, 'ಜೀವಂತ ಐತಿಹ್ಯ'ವಾಗಿ ನಮ್ಮ ನಡುವೆ ಸುಳಿದಾಡುತ್ತಿದ್ದಾರೆ. ಅವರು ಶತಾಯುಷಿಗಳಾದರೆಂದು ಸಂಭ್ರಮಿಸಿ ಜನ ಅಭಿನಂದನೆಯ ಮಹಾಪೂರವನ್ನು ಹರಿಸುತ್ತಿದ್ದಾರೆ; ಸಂದರ್ಶನಗಳು ನಡೆದಿವೆ, ಲೇಖನಗಳು ಬರೆದುಬಂದಿವೆ, ಪುಸ್ತಕಗಳು ಪ್ರಕಟವಾಗಿವೆ.

ನಮಗೆ ಕಾಣುವಂತೆ, ಕಾಣದಂತೆ ಇನ್ನೂ ಕೆಲವರು ಶತಾಯುಷಿಗಳು ನಮ್ಮರಾಜ್ಯದಲ್ಲೇ ಇರಬಹುದು. ಆದರೆ, ಅವರ ವಿಷಯದಲ್ಲಿ ಸಹ ಜನ ಹೀಗೆಯೇ ಉತ್ಸಾಹಿಸುವುದಿಲ್ಲ, ಉತ್ಸವ ಮಾಡುವುದಿಲ್ಲ. ಕ್ರಿಯಾಸಿದ್ಧಿಯಿಂದ ಸತ್ತ್ವಶಾಲಿಗಳಾಗಿ ಬಾಳಿ, ತಮ್ಮ ಬದುಕನ್ನು ಸಾರ್ಥಕ ಪಡಿಸಿಕೊಂಡವರು ಮಾತ್ರ ದೊಡ್ಡಮನ್ನಣೆಗೆ ಪಾತ್ರರಾಗುತ್ತಾರೆ; ನಿಟ್ಟೂರರು ಅಂತಹವರ ಸಾಲಿನಲ್ಲಿದ್ದಾರೆ.

ನಿಟ್ಟೂರು ಶ್ರೀನಿವಾಸರಾಯರ ಸಾತ್ತ್ವಿಕ ವ್ಯಕ್ತಿತ್ವವನ್ನು ಬೆಳಗಿದ ಗುಣಾಂಶಗಳು ಹಲವಾರು. ಅವುಗಳಲ್ಲಿ ಕೆಲವನ್ನು ಹೀಗೆ ಹೇಳಬಹುದು: ಸ್ನೇಹಪ್ರಿಯರು, ಸ್ಮಿತಪೂರ್ವಭಾಷಿಗಳು, ಹಿತಮಿತಮೃದುವಚನರು, ಸ್ವಪರ ಕುಟುಂಬವತ್ಸಲರು, ವಯೋಭೇದವಿಲ್ಲದೆ ಎಲ್ಲರನ್ನೂ ಸಮಭಾವದಲ್ಲಿ ಗೌರವದಿಂದ ಕಾಣುವ ಸಜ್ಜನಿಕೆಯವರು, ಶ್ರೇಯಃಕಾಂಕ್ಷಿಗಳು, ಹಿತೈಷಿಗಳು, ಉತ್ಸಾಹಶಾಲಿಗಳು, ಪ್ರೋತ್ಸಾಹಕರು, ರಾಗದ್ವೇಷಗಳಿಗೆ ಅವಕಾಶ ಕೊಡದ ಸಂಯಮಿಗಳು, ಸರಸಿಗಳು, ಚತುರಮತಿಗಳು, ಪರಿಹಾಸಪ್ರಿಯರು, ಜಾಗೃತಪ್ರಜ್ಞರು, ಒಳ್ಳೆಯ ಜ್ಞಾಪಕಶಕ್ತಿ ಯುಳ್ಳವರು, ಸಮಯಪ್ರಜ್ಞೆಯುಳ್ಳವರು, ವಿನಯಶೀಲರು, ವಿಮರ್ಶವಿಚಕ್ಷಣರು, ಸರಳರು, ಸಂಭಾವಿತರು, ಮಿತಭಾಷಿಗಳು, ದೊಡ್ಡವರ ಸ್ನೇಹಸೌಭಾಗ್ಯ ಗಳಿಸಿದವರು ಮತ್ತು ಸಹವಾಸದಲ್ಲಿ ಬೆಳೆದವರು, ರಾಷ್ಟ್ರಪ್ರೇಮಿಗಳಾದ ರಾಷ್ಟ್ರಕರು, ರಾಷ್ಟ್ರಹಿತಚಿಂತಕರು, ಆಪ್ತಸಖರು, ವಿದ್ಯಾವಂತರು.

ಈ ಗುಣಗಳು ತಮ್ಮತಮ್ಮಲ್ಲಿಯೇ ಸ್ಪರ್ಧಿಸಿ, ಅವರನ್ನು ಉದಾತ್ತತೆಯ ನೆಲೆಗೆ ಏರಿಸಿವೆ; ನಿಡಿಯರಲ್ಲಿ ನಿಡಿಯರನ್ನಾಗಿ ಮಾಡಿವೆ; ಇಂತಹ ಗುಣಕಣಗಳೆಲ್ಲ ಒಗ್ಗೂಡಿ ನಿರ್ಮಾಣಗೊಂಡ ಪ್ರಭಾವಳಿ ಅವರನ್ನು ಒಬ್ಬ ಮಹನೀಯವ್ಯಕ್ತಿಯನ್ನಾಗಿ ಮಾಡಿದೆ; "ಜಟ್ಟಿಗರ ಗುರುವಾಗು ಭಾಗ್ಯದ । ಪಟ್ಟವಣೆಯನು ಹತ್ತು ನಿನ್ನಯ । ಹುಟ್ಟಿದೂರಿನ ಹೆಸರ ಬೊಟ್ಟಿಡು ಜಸದ ನೊಸಲಿನಲಿ ॥" ಎಂಬ ಎಸ್.ಜಿ. ನರಸಿಂಹಾಚಾರ್ಯರ ಕವಿತೆಯೊಂದರ ಸಾಲುಗಳಿಗೆ ಸಾರ್ಥಕತೆ ತಂದಿದೆ. ಸ್ವಾರಸ್ಯವೆಂದರೆ, ಜಾತಿ ವಂಶ ವಿದ್ಯೆ ಪದವಿ ಪ್ರಶಸ್ತಿ ಹಿರಿತನ ಸುಸ್ಥಿತಿ ಇವು ಒಂದೊಂದೆ ಇದ್ದರೂ ವ್ಯಕ್ತಿಯ ಅಹಂಕಾರ ಪುಟಗೊಳ್ಳಲು ಕಾರಣವಾಗಬಹುದು. ಇವೆಲ್ಲ ಒಂದೇ ಕಡೆ

ಸೇರಿದಾಗ ಹೇಳಬೇಕಾಗಿಯೇ ಇಲ್ಲ. ಆದರೆ ನಿಟ್ಟೂರರನಲ್ಲಿ ಇವೆಲ್ಲ ಮಧುರವಾಗಿ ಮೇಳೈಸಿವೆ, ಮರೆಯುವುದಕ್ಕೆ ಹೋಗಿಲ್ಲ. ಹಾಗೆಂದೇ ಅವರನ್ನು ಎಲ್ಲರೂ ಏಕಕಾಲದಲ್ಲಿ ಭಕ್ತಿ ಗೌರವಗಳಿಂದ ಕಾಣುತ್ತಾರೆ, ಸ್ನೇಹ ಸಲಿಗೆಗಳಿಂದ ನುಡಿಸುತ್ತಾರೆ. ಉಚ್ಚನ್ಯಾಯಾಲಯದ ನ್ಯಾಯಮೂರ್ತಿಗಳೂ ಹಂಗಾಮಿ ರಾಜ್ಯಪಾಲರೂ ಆಗಿದ್ದ ಸಂದರ್ಭದಲ್ಲಿ ದುಡ್ಡು ಕೊಟ್ಟು ಟಿಕೇಟುಕೊಂಡು ಮಾಸ್ಟರ್ ಹಿರಣ್ಣಯ್ಯನವರ ನಾಟಕ ನೋಡಲು ತಮ್ಮ ಕುಟುಂಬದವರೊಂದಿಗೆ ಹೋಗಿದ್ದ ಪ್ರಸಂಗವನ್ನು ನೆನೆದರೆ ಅವರ ಶೀಲವ್ಯಕ್ತಿತೆಯ ಸ್ವರೂಪವೇನೆಂದು ತಿಳಿಯುತ್ತದೆ.

* * *

ನಮ್ಮ ಪರಸ್ಪರ ಭೇಟಿ ಎಂದು ಆಯಿತೋ, ನೆನಪಾಗುತ್ತಿಲ್ಲ. ನಾನು ಬೆಂಗಳೂರು ಜಿಲ್ಲೆಯ ಕಾನಕಾನಹಳ್ಳಿಯವನು ಎಂದು ಕೇಳಿ ತಿಳಿಯುತ್ತಲೇ ಅವರು ಉತ್ಸಾಹಿತರಾದರು. ಅಲ್ಲಿಯ ತಮ್ಮ ಸ್ನೇಹಿತರ ಬಳಗವನ್ನು ಪ್ರೀತಿಯಿಂದ ನೆನಪುಮಾಡಿಕೊಂಡರು. ಸರ್ದಾರ್ ವೆಂಕಟರಾಮಯ್ಯನವರು, ಕ್ಲೋಸ್‌ಪೇಟೆ ಸುಬ್ಬರಾಯರು, ಎಸ್. ಕರಿಯಪ್ಪನವರು, ಮಳಗಾಳು ಲಿಂಗೇಗೌಡರು ಇವರನ್ನೆಲ್ಲ ಆರ್ದ್ರಭಾವದಿಂದ ನೆನಪುಮಾಡಿಕೊಂಡರು. ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ಒಂದಾನೊಂದು ವಿಶೇಷ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಯನ್ನಾಗಿ ಆಹ್ವಾನಿಸಿ ಒಪ್ಪಿಸಿಕೊಂಡು ಬರಲು ಹಾ.ಮಾ. ನಾಯಕರು ನನ್ನನ್ನು ನಿಯೋಜಿಸಿದ್ದರು. ನಾನು ಬೆಂಗಳೂರಿಗೆ ಹೋಗಿ ನಿಟ್ಟೂರರನ್ನು ಅವರ ಮನೆಯಲ್ಲಿಯೇ ಭೇಟಿಮಾಡಿ, ಬಂದ ಉದ್ದೇಶವನ್ನು ವಿವರಿಸಿದೆ. "ಅಪ್ಪಾ, ಮನೆಯವರೆಗೆ ಬಂದು ಆಹ್ವಾನ ಕೊಡುತ್ತಿದ್ದೀರಿ; ಸಂತೋಷ, ಬರುತ್ತೇನೆ" ಎಂದರು. ಮಾತಿನಂತೆ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಸಂಸ್ಥೆಯ ಛಾಯಾಗ್ರಾಹಕ ಅರ್ಕೇಶ್ ಪ್ರತ್ಯೇಕವಾಗಿ ನಮ್ಮಿಬ್ಬರ ಭಾವಚಿತ್ರ ತೆಗೆಯಲು ಅಪೇಕ್ಷಿಸಿದಾಗ, ಆತ ಇಚ್ಛಿಸಿದ ಭಾವಭಂಗಿಗಳಲ್ಲಿ ನಿಂತು ಸಹಕರಿಸಿ ತಮ್ಮ ಸರಳತೆಯನ್ನು ಮೆರೆದರು.

ನಿಟ್ಟೂರರ ಅಪೇಕ್ಷೆಯಂತೆ ನಾನು ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯ ಕೆಲವು ದತ್ತಿ ಉಪನ್ಯಾಸದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದೆ. ಮುಮ್ಮಡಿ ಕೃಷ್ಣರಾಜರ ಕಾಲದ ಕೆಲವರು ಸಂಸ್ಕೃತ ಪಂಡಿತರು, ಅರಮನೆ ವಿದ್ವಾಂಸ ಜಯರಾಯಾಚಾರ್ಯರು, ಸೋಸಲೆ ಗರಳಪುರಿ ಶಾಸ್ತ್ರಿಗಳು, ಡಿ.ವಿ.ಜಿ.ಯವರು ಇವರ ಬಗೆಗೆ ನಾನು ಮಾಡಿದ ಉಪನ್ಯಾಸಗಳಿಗೆಲ್ಲ ಬಲುಮಟ್ಟಿಗೆ ಅವರು ಬಂದಿದ್ದರೆಂದೇ ನನ್ನ ಜ್ಞಾಪಕ.

ಹೀಗೆಯೇ ಉಪನ್ಯಾಸ ಕಾರ್ಯಕ್ರಮಗಳಿಗೆ ನಾನು ಬರುತ್ತಿದ್ದಾಗಲೆಲ್ಲ ಅವರನ್ನು ಪ್ರತ್ಯೇಕವಾಗಿ ಭೇಟಿಮಾಡಿ ಮಾತನಾಡುವುದು ಪರಿಪಾಠಿಯಾಗಿತ್ತು. ಆಗ ಒಂದು ಸಂಧರ್ಭದಲ್ಲಿ, ನಾನು ಎಸ್.ಜಿ. ನರಸಿಂಹಾಚಾರ್ಯರ ಜೀವನ ಕೃತಿಗಳ ಬಗೆಗೆ ಕೆಲಸಮಾಡುತ್ತಿದ್ದ ಕಾರಣ, "ಎಸ್. ಜಿ. ನರಸಿಂಹಾಚಾರ್ಯರನ್ನು ನೀವು ಕಂಡಿದ್ದಿರಾ?" ಎಂದು ಕೇಳಿದೆ. ೧೯೦೭ರಲ್ಲಿಯೇ ಎಸ್.ಜಿ.ನ. ತೀರಿಕೊಂಡರಾದ ಕಾರಣ ನಿಟ್ಟೂರರು ಅವರನ್ನು ತಮ್ಮ ತೀರ ಚಿಕ್ಕ ವಯಸ್ಸಿನಲ್ಲಿ ಕಾಣುವ, ಜ್ಞಾಪಕದಲ್ಲಿ ಉಳಿಸಿಕೊಳ್ಳುವ ಸಂಭವ ಶಕ್ಯವಿಲ್ಲ ಎನ್ನುವ ಸತ್ಯ ನನ್ನ ದಡ್ಡಮನಸ್ಸಿಗೆ ಹೊಳೆಯಲೇ ಇಲ್ಲ. ಅವರು ಕೂಡಲೇ "ಇಲ್ಲ" ಎಂದರಲ್ಲದೆ, ತಾವು ಆರ್. ನರಸಿಂಹಾಚಾರ್ಯರನ್ನು, ಎಂ.ಎ. ರಾಮಾನುಜಯ್ಯಂಗಾರ್ಯರನ್ನು ಕಂಡಿದ್ದುದ್ದಾಗಿ ಹೇಳಿದರು. ಆಗಲೇ ಒಂದು ಪರಿಹಾಸೋಕ್ತಿಯನ್ನು ಆಡಿದರು. ಸಾಹಿತಿಗಳಾದ ಎ. ಕೇಶವಯ್ಯನವರು ಕನ್ನಡಿಗರ ಮೃದು ಸೌಮ್ಯ ಸ್ವಭಾವವನ್ನು ಅವರ ಬರಹದ ಲಿಪಿಯಿಂದಲೇ ಗುರುತಿಸಬಹುದು ಎನ್ನುವುದನ್ನು ಹೀಗೆ ಹೇಳುತ್ತಿದ್ದರಂತೆ:

"ಉರ್ದುಭಾಷೆಯ ಲಿಪಿ ಕತ್ತಿ ಕಠಾರಿಗಳನ್ನು ಹೋಲುತ್ತದೆ, ಕನ್ನಡ ಲಿಪಿ ಚಕ್ಕಲಿ ಕೋಡುಬಳೆಗಳನ್ನು ಹೋಲುತ್ತದೆ." ಹೀಗೆ ಹೇಳಿ ಮೆಲ್ಲಗೆ ನಿಟ್ಟೂರರು ನಕ್ಕರು. ಅದು ಮಿಂಚು ಹೊಳೆಯುವ ನಗೆ!

ನನ್ನ ಅರುವತ್ತರ ಸಮಾರಂಭದಲ್ಲಿ ಎ.ಎನ್. ಮೂರ್ತಿರಾಯರೂ ನಿಟ್ಟೂರು ಶ್ರೀನಿವಾಸರಾಯರೂ ಹಾಜರಿದ್ದು, ವೇದಿಕೆಯ ಮೇಲಿಂದ ನನ್ನನ್ನು ಹೃತ್ಪೂರ್ವಕವಾಗಿ ಹರಸಿ ಒಳ್ಳೆಯ ನಾಲ್ಕು ಮಾತುಗಳನ್ನಾಡಿದ್ದನ್ನು ಮರೆಯುವ ಹಾಗಿಲ್ಲ.

ನಾನು ಬಿ.ಎಂ.ಶ್ರೀಕಂಠಯ್ಯ ಸ್ಮಾರಕ ಪ್ರತಿಷ್ಠಾನದಲ್ಲಿ ಕಾರ್ಯಕಾರಿ ಸಮಿತಿಯ ಸದಸ್ಯನಾದ ಮೇಲೆ, ಈಚೆಗೆ ಅಧ್ಯಕ್ಷನಾದ ಮೇಲೆ, ಅವರೊಂದಿಗೆ ನನ್ನ ಒಡನಾಟ ಹೆಚ್ಚಿತು. ಅವರ ಗುಣಶೀಲಗಳನ್ನು ಹತ್ತಿರದಿಂದ ತಿಳಿಯುವ, ತೂಗಿ ನೋಡುವ ಅವಕಾಶಗಳೂ ಹೆಚ್ಚಿದುವು. ಮುಖ್ಯವಾಗಿ ಅವರ ವ್ಯಕ್ತಿತ್ವದ ಘನತೆ ಗಾಂಭೀರ್ಯಗಳ ಮನೋಜ್ಞತೆ ಮಾರ್ದವಗಳ ನೆಲೆಗಳು ತಕ್ಕಮಟ್ಟಿಗೆ ತಿಳಿವಿಗೆ ಬರತೊಡಗಿದುವು. ಪ್ರತಿಷ್ಠಾನದ ಅಧ್ಯಕ್ಷನಾದ ಮೇಲೆ, ವಿನೋದಕ್ಕೆ ಆಗೊಂದು ಸಲ, ಇನ್ನೊಂದು ಸಲ ಒಂದು ಮಾತು ಹೇಳುತ್ತಿರುತ್ತಾರೆ : "ನಾನು ಗೌರವಾಧ್ಯಕ್ಷ, ನೀವು ಬರಿಯ ಅಧ್ಯಕ್ಷರು, 'ಗೌರವ' ಇಲ್ಲದ ಅಧ್ಯಕ್ಷರು!' ಹೀಗೆ ಹೇಳಿ ಅವರು ಮೆಲ್ಲಗೆ ನಗುತ್ತಾರೆ. ಆ ಮಾತು, ಆ ನಗೆ ಚೆಲುವಾದವು.

ನಮ್ಮ ನಾಡಿನ ಅನೇಕ ರಾಷ್ಟ್ರೀಯ ಸಾಂಸ್ಕೃತಿಕ ಘಟನೆಗಳ ಬಗೆಗೆ, ರಾಷ್ಟ್ರದ ಉನ್ನತಿ ಹಿರಿಮೆಗಳಿಗೆ ಕಾರಣರಾದ ಮಹನೀಯರ ಬಗೆಗೆ ತಮ್ಮ ನೆನಪಿನ ಆಳದ ಗಣಿಯಿಂದ ಅವರು ಹೆಕ್ಕಿ ತೆಗೆಯುವ ಸಾಮಾಗ್ರಿಗಳು ಅಮೂಲ್ಯವಾದುವು, ಹೃದಯಂಗಮವಾದುವು. ಸಂಗತಿಗಳ ನಿರೂಪಣೆಯಂತೂ ನಿರಾಡಂಬರ ಸೌಂದರ್ಯದ ಸ್ವಭಾವೋಕ್ತಿಗಳು. ವೆಂಕಣ್ಣಯ್ಯನವರನ್ನು ಕುರಿತು ಮಾತಾಡುವಾಗ ಅವರ ತಂದೆಯವರ ಬಗ್ಗೆಯೂ ಮಾತಾಡಬಲ್ಲರು, ಡಿ.ವಿ.ಜಿ. ಅವರ ಬಗ್ಗೆ ನೆನೆಯುವಾಗ ಅವರ ತಂದೆಯವರನ್ನೂ ನೆನೆದುಕೊಳ್ಳುತ್ತಾರೆ. ಈ ಮಾತು ನೆನಕೆಗಳ ಹಿಂದೆ ಒಂದು ಆರ್ದ್ರವಾದ ಅಂತಃಕರಣ ಜಿನುಗುತ್ತಿರುವುದನ್ನು ಗುರುತಿಸಬಹುದು. ಅವರ ಮಾತುಗಾರಿಕೆಯಂತೂ ಉದ್ವೇಗ ಉದ್ರೇಕಗಳಿಲ್ಲದ್ದು, ತಳ್ಳಗೆ ಬಳುಕಿ ಹರಿಯುವ ತಿಳಿನೀರಿನ ಕಾಲುವೆಯ ಗತಿಗೆ ಸದೃಶವಾದ್ದು, ಎದುರಿನಲ್ಲಿ ಕುಳಿತವರೊಂದಿಗೆ ಸಂಭಾಷಣೆ ನಡಸುವ ಜಾಣ್ಮೆ ಎಂದು ಹೇಳಬಹುದಾದ ವೈಖರಿಯದು. ಆ ವೈಖರಿ ನನ್ನಿಂದ ಏಕೆ ಇನ್ನೂ ಸಾಧ್ಯವಾಗಿಲ್ಲ ಎಂಬ ಕೊರಗು ನನಗೆ ಬಹಳಕಾಲದಿಂದಲೂ ಇದೆ.

ನಿಟ್ಟೂರರ ಪ್ರೀತಿ ವಿಶ್ವಾಸಗಳನ್ನು ಗಳಿಸಿದ ಸೌಭಾಗ್ಯಶಾಲಿಗಳು ನಮ್ಮ ನಾಡಿನ ತುಂಬ ಇದ್ದಾರೆ. ಅವರಲ್ಲಿ ನಾನೂ ಒಬ್ಬ. "ನಾನೇ ಅವರಿಗೆ ಹೆಚ್ಚು ಇಷ್ಟವಾದವನು" ಎಂದು ಸಂಪರ್ಕಕ್ಕೆ ಬಂದವರಲ್ಲಿ ಪ್ರತಿಯೊಬ್ಬನೂ ತಿಳಿಯುವ ಹಾಗೆ ನಡೆದುಕೊಳ್ಳುವ ನಿಟ್ಟೂರರ ಸ್ವಭಾವ ಕೌಶಲವಂತೂ ಅನನ್ಯವಾದ್ದು. ಈ ಕೌಶಲ ಕೃತಕವಾದ್ದಲ್ಲ, ನೈಜವಾದ್ದು ಎನ್ನುವುದು ಎಲ್ಲರಿಗೂ ತಿಳಿದ ಸಂಗತಿ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಗೌರವಾಧ್ಯಕ್ಷರಾಗಿ ಪ್ರತಿಷ್ಠಾನದ ಪ್ರತಿಷ್ಠೆಯನ್ನು ಅವರು ಹೆಚ್ಚಿಸಿದ್ದಾರೆ; ಅದರ ಗುರುತ್ವವೂ ಹೆಚ್ಚಿದೆ, ಆಕರ್ಷಣೆಯೂ ಹೆಚ್ಚಿದೆ. ಎಲ್ಲ ಸದಸ್ಯರನ್ನೂ ಅವರು ತಮ್ಮ ಕುಟುಂಬದ ಬಂಧುಗಳಂತೆ, ಗೆಳೆಯರಂತೆ ನುಡಿಸುವುದೂ ನಡಸಿಕೊಳ್ಳುವುದೂ ಎಲ್ಲರ ಆಪ್ತತೆಯನ್ನೂ ಅವರಿಗೆ ಗಳಿಸಿಕೊಟ್ಟಿದೆ. ಅವರ ಮಾರ್ಗದರ್ಶನ ಆಶೀರ್ವಾದಗಳು ಇನ್ನೂ ಹಲವು ಕಾಲ ಹೀಗೆಯೇ ದೊರೆಯಲೆಂಬುದು ನಮ್ಮ ಹಾರೈಕೆಯಾಗಿದೆ. ■

# ಸಮಸ್ಯಾಪೂರಣ

- *ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯ*

ಸಹೃದಯರು ಒಟ್ಟಿಗೆ ಸೇರಿ ವಿನೋದಾಲಾಪದಲ್ಲಿ ತೊಡಗಿದಾಗ ಒಗಟುಗಳು ಮತ್ತು ಸಮಸ್ಯೆಗಳು ಪ್ರಾಧಾನ್ಯ ಪಡೆಯುತ್ತವೆ. ಉದಾಹರಣೆಗಾಗಿ ಎರಡು ಒಗಟುಗಳು :

೧. ಚಂದ್ರಬಿಂಬ ಸಮಂವಸ್ತು ವಸ್ತುನಾಮಾಕ್ಷರತ್ರಯಂ।
ಹಕಾರಾದಿ ಳಕಾರಾಂತಂ ಯೋಜಾನಾತಿ ಸ ಪಂಡಿತಃ॥
(ಚಂದ್ರಬಿಂಬದ ಆಕೃತಿಯುಳ್ಳ ವಸ್ತು; ಮೂರಕ್ಷರಗಳ ಹೆಸರುಳ್ಳದ್ದು. ಮೊದಲಕ್ಷರ 'ಹ'; ಕೊನೆಯಕ್ಷರ 'ಳ'. ಇದನ್ನು ತಿಳಿದವನು ವಿದ್ವಾಂಸ.)

ಉತ್ತರ: 'ಹಪ್ಪಳ'

೨. ಕೆಂಪು ಕುದುರೆ, ಕರಿಯ ತಡಿ, ಒಬ್ಬ ಹತ್ತುತ್ತಾನೆ; ಒಬ್ಬ ಇಳಿಯುತ್ತಾನೆ.

ಉತ್ತರ: ಕೆಂಪು ಕುದುರೆ - ಒಲೆಯ ಬೆಂಕಿ, ಕರಿಯತಡಿ - ಕಾವಲಿ, ಹತ್ತಿಳಿಯುವುದು - ದೋಸೆ.

ಇನ್ನು ಸಮಸ್ಯೆಗಳ ವಿಚಾರ. ಅಪಾರ್ಥವಾಗುವ, ಅಥವಾ ಸರಿಯಾಗಿ ಅರ್ಥವಾಗದಿರುವ ಪದ್ಯಭಾಗವನ್ನೋ ಅಥವಾ ಮೊದಲ ಮೂರು ಪಾದಗಳಲ್ಲಿ ಕೇಳಿರುವ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಒಂದು ಪದವನ್ನೋ, ಪದಪುಂಜಗಳನ್ನೋ ಒಳಗೊಂಡ ನಾಲ್ಕನೆಯ ಪಾದ ಅಥವಾ ಅದರ ಭಾಗವೇ ಸಮಸ್ಯೆ. ಈ ಸಮಸ್ಯೆ ಕೊಟ್ಟಾಗ ಅದು ಸಮಂಜಸವಾಗಿ ಹೊಂದಿಕೊಳ್ಳುವಂತೆ ಪೂರ್ಣಪದ್ಯದ ರಚನೆಯೇ ಸಮಸ್ಯಾಪೂರಣ.

ಬಾಲವಿದ್ಯಾರ್ಥಿಗಳಿಗಾಗಿ ರಚಿಸಿದ ಒಂದು ಸಮಸ್ಯೆ:

| | |
|---|---|
| ದ್ವಿಷಂತಿ ಯಂ ಚೋರಗಣಾ ಗ್ರಹೇಷು | ಯಾವ ಗ್ರಹವನ್ನು ಕಳ್ಳರು ದ್ವೇಷಿಸುತ್ತಾರೆ? |
| ಖರೋಽಕರೋತ್ಕಿಂ ರಜಕಸ್ಯ ಮೃತ್ಯೌ। | ಅಗಸ ಸತ್ತಮೇಲೆ ಕತ್ತೆ ಏನು ಮಾಡಿತು? |
| ಯೋಽತ್ಯುತ್ತಮೋ ಪ್ರಾಣಿಷು ಬ್ರಹ್ಮಸೃಷ್ಟೌ | ಬ್ರಹ್ಮನ ಸೃಷ್ಟಿಯಲ್ಲಿ ಅತ್ಯುತ್ತಮ ಪ್ರಾಣಿ ಯಾವುದು? |
| <u>ಚಂದ್ರಂಗತೋಮಾನವ ಇತ್ಯವೈಹಿ।</u> | |

ಉತ್ತರಗಳು: ಕ್ರಮವಾಗಿ ಚಂದ್ರನನ್ನು, (ಓಡಿ) ಹೋಯಿತು ಮತ್ತು ಮಾನವ.

(ಇಲ್ಲೂ ಮುಂದೆಯೂ ಸಮಸ್ಯಾ ಭಾಗವನ್ನು ಕೆಳಗೆ ಗೆರೆ ಎಳೆದು ತೋರಿಸಿದೆ)

ಅಸಂಭಾವ್ಯವಾದ ಒಂದು ಕ್ರಿಯೆಯನ್ನು ಸಮಸ್ಯಾರೂಪದಲ್ಲಿ ಕೊಟ್ಟಿರುವ ಎರಡು ಉದಾಹರಣೆಗಳು :

೧. ಜೀರ್ಣದಂತೋ ಶೀರ್ಣನಖಃ ಜರಾಜರ್ಜರಿತೇಂದ್ರಿಯಃ।
ಮಹಾವೃಕ್ಷಾನ್ ಪಾತಯತೋ **<u>ಗಜಾತ್ಸಿಂಹಃ ಪಲಾಯತೇ॥</u>**

ದೊಡ್ಡ ದೊಡ್ಡ ಮರಗಳನ್ನು ಕಿತ್ತು ಉರುಳಿಸುತ್ತಿರುವ (ಮದಿಸಿದ) ಆನೆಯನ್ನು ನೋಡಿ, ಹಲ್ಲು ಸವೆದುಹೋಗಿ ಉಗುರುಗಳೆಲ್ಲ ಚೂರುಪಾರಾಗಿ ಹೋಗಿರುವ ತುಂಬ ಮುಪ್ಪಿನಿಂದ ಇಂದ್ರಿಯಪಾಟವವನ್ನು ಕಳೆದುಕೊಂಡಿರುವ ಸಿಂಹವು ಓಡಿಹೋಗುತ್ತದೆ.

೨. ಜೀರ್ಣದಂತಃ ಶೀರ್ಣನಖಃ ಜರಾಜರ್ಜರ ಗಾತ್ರವಾನ್।
ವೃಕ್ಷೇಷು ಶೃಂಗಾನ್ ಕಷತಃ ಮೃಗಾತ್ಸಿಂಹಃ ಪಲಾಯತೇ॥

ಹಲ್ಲುಗಳೆಲ್ಲ ಸವೆದು ಉಗುರುಗಳು ಚೂರುಪಾರಾಗಿ ಹೋಗಿ ಮುಪ್ಪಿನಿಂದ ಸವೆದ ಅಂಗಗಳುಳ್ಳ ಸಿಂಹವು, ಮರಕ್ಕೆ ಕೊಂಬುಗಳನ್ನು ಉಜ್ಜಿ (ಚೂಪಾಗಿ ಮಾಡಿ) ಕೊಳ್ಳುತ್ತಿರುವ ಒಂದು ಸಾರಗವನ್ನು ನೋಡಿ (ಪೂರ್ವವೈರವನ್ನು ಸ್ಮರಿಸಿಕೊಂಡು) ಓಡಿಹೋಗುತ್ತದೆ.

ಮಾಡಲು ಅಸಾಧ್ಯವೆಂದು ಭಾವಿಸಿದ ಕಾರ್ಯವನ್ನು ಮಾಡಿದಂತೆ ಹೇಳಿರುವ ಒಂದು ಸಮಸ್ಯೆ: ಚಂದ್ರಂಗತೋಮಾನವಃ (ಮನುಷ್ಯನು ಚಂದ್ರನನ್ನು ಹೋಗಿ ಸೇರಿದನು) ಎಂಬುದು.

ಶುದ್ಧೋಽಹಂ ನಿಪುಣಃ ಕಲಾಸುಕುಶಲಃ ನಿತ್ಯಂ ಪ್ರಜಾಸೇವಕಃ।
ಭೂಮಿಸ್ಸ್ವರ್ಗಸಮಾ ಭವೇದ್ವಿಧಿಸಭಾಸ್ತಾರೋ ಭವೇಯಂ ಯದಿ॥
ಉದ್ಘುಷ್ಯೈತ್ಥಮಸೌ ಯದಾ ಸಮಭವನ್ಮಂತ್ರೀ ಪ್ರಜಾಶೋಷಕಃ।
ಸ್ವರ್ಗಂ ಪ್ರಾಪಯತೀಹಮಾಮಿತಿ ಭಿಯಾ ಚಂದ್ರಂ ಗತೋ ಮಾನವಃ॥

"ನಾನು ಶುದ್ಧ ಚಾರಿತ್ರ್ಯಉಳ್ಳವನು; ನಿಪುಣ; ಸಕಲ ವಿದ್ಯೆಗಳನ್ನು ಬಲ್ಲ ಜಾಣ; ಸದಾ ಜನಸೇವೆಯಲ್ಲಿ ನಿರತನಾದವನು; ನನ್ನನ್ನು ವಿಧಾನಸಭೆಯ ಸದಸ್ಯನಾಗಿ (ನೀವು ಮತದಾನ ನೀಡಿ) ಮಾಡಿದರೆ ಭೂಮಿಯನ್ನು ಸ್ವರ್ಗ ಸಮಾನವಾಗಿ ಮಾಡುತ್ತೇನೆ' ಎಂದು ಗಟ್ಟಿಯಾಗಿ ಕೂಗುತ್ತಾ ಪ್ರಚಾರ ಮಾಡಿ, ಆಯ್ಕೆಯಾದವನು ಮಂತ್ರಿ ಪದವಿ ಪಡೆದು (ಜನಗಳ ಮೇಲೆ ತನ್ನ ಪ್ರಭಾವವನ್ನು ಬೀರಿ ಅವರ ಕೆಲಸ ಮಾಡಿ ಕೊಡಲು ಹಣ ಎಳೆಯುತ್ತ) ಪ್ರಜಾಶೋಷಕನಾದಾಗ, ಸಾಮಾನ್ಯ ಜನತೆ, ಹೀಗಿದ್ದರೆ ನಮ್ಮ ಜೀವ ಇಲ್ಲಿ ಉಳಿಯದೆಂದು ಹೆದರಿ ಚಂದ್ರನಿಗೆ ವಲಸೆ ಹೋಯಿತು.

"ಅಪುತ್ರ ತನಯಂನುಮಃ" (ಮಗನ ಮಗನಿಲ್ಲದವನಿಗೆ ನಮಿಸೋಣ) ಎಂಬ ಸಮಸ್ಯೆ ವಿಚಿತ್ರವಾಗಿ ತೋರುತ್ತದೆ. ಮೊಮ್ಮಕ್ಕಳಿಲ್ಲದವನಿಗೆ ಏಕೆ ನಮಸ್ಕರಿಸಬೇಕು? ಅವನಲ್ಲಿರುವ ಹೆಚ್ಚಳವೇನು? ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. "ಅಪುತ್ರತನಯ" ವೆಂಬ ಪದಕ್ಕೆ ಬೇರೆ ರೀತಿಯಲ್ಲಿ ಅರ್ಥಮಾಡಿ ಸಮಸ್ಯೆಯನ್ನು ಪೂರೈಸಿದೆ ಇಲ್ಲಿ:

"ಅಃ" ಎಂದರೆ ವಿಷ್ಣು; ಅವನ ಪುತ್ರ "ಅಪುತ್ರ"ನೆಂದರೆ ಬ್ರಹ್ಮ.

| | |
|---|---|
| ಪುರೋಧಸಂ ದಾಶರಥೇಃ | ದಾಶರಥಿ (ಶ್ರೀರಾಮ)ಗೆ ಪುರೋಹಿತನೂ, ವ್ಯಾಸನಿಗೆ |
| ವ್ಯಾಸಸ್ಯ ಪ್ರಪಿತಾಮಹಂ | ಮುತ್ತಾತನೂ, ಬ್ರಹ್ಮತೇಜಸ್ಸಿನ ನಿಧಿಯೂ, |
| ಬ್ರಹ್ಮತೇಜೋನಿಧಿಂ ಶಾಂತಂ | ಶಾಂತನೂ ಆದ (ಅಪುತ್ರತನಯ) ಬ್ರಹ್ಮಪುತ್ರ |
| ಅಪುತ್ರತನಯಂ ನುಮಃ॥ | ವಸಿಷ್ಠ ಮಹರ್ಷಿಗೆ ನಮಿಸೋಣ |
| ವಿಷ್ಣೋಶ್ಚಭಾಸ್ಕರಸ್ಯಾಪಿ | ಯಾರ ಮಕ್ಕಳೀರ್ವರು ವಿಷ್ಣುವಿಗೂ ಮತ್ತು ಸೂರ್ಯನಿಗೂ |
| ವಾಹನೌ ಯತ್ತನೂಭವೌ | ವಾಹನಗಳಾಗಿರುವರೋ (ಕ್ರಮವಾಗಿ ಗರುಡ ಮತ್ತು |
| ಪಿತರಂ ದೇವದೈತ್ಯಾನಾಂ | ಅರುಣ, ಆ ದೇವ ದೈತ್ಯರಿಗೆಲ್ಲ ತಂದೆಯಾದ |
| ಅಪುತ್ರತನಯ ನುಮಃ | (ಅಪುತ್ರತನಯ) ಬ್ರಹ್ಮಪುತ್ರ ಕಶ್ಯಪ ಮಹರ್ಷಿಗೆ ನಮಿಸೋಣ |

ಮೈಸೂರು ಆಸ್ಥಾನ ವಿದ್ವಾಂಸರಾಗಿದ್ದ ಮಹಾವಿದ್ವಾನ್ ಚಾಮರಾಜನಗರದ ರಾಮಶಾಸ್ತ್ರಿಗಳು ಪೂರ್ಣ ಮಾಡಿದ ಒಂದು ಸೊಗಸಾದ ಸಮಸ್ಯೆ:

ಕೃಷ್ಟೈರ್ಹಂತ ಬಲಾತ್ಪದ್ಯೈಃ ಕತಿಪಯೈಃ ಪದ್ಯಾತ್ಮನಾ ಸಾಹಸಾತ್।
ಅಸ್ಮಾಕಂ ಮುಖತೋಽಪ್ಯುದಂಚತಿ ನಕಿಂ ಯೂಕಾಪಿ ವಾಕ್ಯಂತಯಾ॥
ಸೂಕ್ತಿಃ ಕಸ್ಯಚಿದೇವ ಸಾ ವಿಜಯತೇ ಯಾ ದ್ವೇಷ ದುಷ್ಟಾತ್ಮನಾಂ।
ಶತ್ರೂಣಾಮಪಿ ಕರ್ಣಯೋಃ **ಕೃತಸುಧಾವರ್ಷಾ ಮನಃ ಕರ್ಷತಿ॥**

(ಬಹಳ ಸಾಹಸಪಟ್ಟು ಎಲ್ಲೆಲ್ಲಿಂದಲೋ ಕೆಲವು ಪದಗಳನ್ನೆಳೆದು ತಂದು, ಅವನ್ನು ಜೋಡಿಸಿ ನಾವೂ ಯಾವುದೋ ಪದ್ಯ ರಚನೆ ಮಾಡುತ್ತೇವೆಯಷ್ಟೆ. ಅದರಿಂದ ಏನು ಬಂತು! ಯಾರೋ ಒಬ್ಬ (ಮಹಾತ್ಮ)ನು ಶತ್ರುಗಳ ಕಿವಿಯಲ್ಲಿ ಕೂಡ ಅಮೃತ ಸೇಚನೆ ಮಾಡಿ ಅವನ ಮನಸೆಳೆಯುತ್ತಾನೋ (ಎಂದರೆ ಅವರ ದುಷ್ಟ ಮನಸ್ಸನ್ನು ಪರಿವರ್ತಿಸುತ್ತಾನೋ) ಅವನ ಉತ್ತಮವಾದ ಉಕ್ತಿಯೇ ಸರ್ವೋತ್ಕೃಷ್ಟವಾಗಿ ವಿರಾಜಿಸುತ್ತದೆ.)

ಇದೇ ರಾಮಶಾಸ್ತ್ರಿಗಳೇ "ಮಹಾಂತರ್ಲಾಪ ಪಂಚರತ್ನ" ವೆಂಬ ಹೆಸರಿನಲ್ಲಿ ಸಮಸ್ಯಾಪೂರಣ ರೂಪದ ೫ ಪದ್ಯಗಳನ್ನು ರಚಿಸಿದ್ದಾರೆ. ಅವು ಬಹಳ ಚಮತ್ಕಾರಕ ಮತ್ತು ಸ್ವಾರಸ್ಯಕರವಾಗಿವೆ.

ಮಹಾಂತರ್ಲಾಪ ಚಿತ್ರಪದ್ಯ ಲಕ್ಷಣವನ್ನು ಶಾಸ್ತ್ರಿಗಳೇ ಹೀಗೆ ವಿವರಿಸಿದ್ದಾರೆ :

ಬೃಹದ್ವೃತ್ತೇಽನ್ತ್ಯ ಪಾದೋಽನ್ತ್ಯಪ್ರಶ್ನಸ್ಯೋತ್ತರತಾಂವ್ರಜೇತ್।
ಸಏವ ಪದ ವಿಚ್ಛೇದ ವೈಚಿತ್ರ್ಯಾದರ್ಥ ಭೇದಭಾಕ್॥
ಖಂಡಶಃ ಕ್ರಮತೋಽನ್ಯೇಷಾಂ ಪ್ರಶ್ನಾನಾಮುತ್ತರಂಭವೇತ್।
ಏವಂ ಲಕ್ಷಣಯುಕ್ ಚಿತ್ರಂ ಮಹಾಂತರ್ಲಾಪ ಉಚ್ಯತೇ॥

(ಒಂದು ದೊಡ್ಡ ವೃತ್ತದಲ್ಲಿ, ಕೊನೆಯ ಪಾದವು ಕೊನೆಯ ಪ್ರಶ್ನೆಗೆ ಉತ್ತರವಾಗಿರುತ್ತದೆ. ಆ ಪಾದವನ್ನು ಪದಗಳಾಗಿ ವಿಂಗಡಿಸುವ ವಿಚಿತ್ರಕ್ರಮದಿಂದ ಅರ್ಥ ಬದಲಾಗಿ, ಒಂದೊಂದು ಪದ ಕ್ರಮವಾಗಿ, ಒಂದೊಂದು ಪ್ರಶ್ನೆಯ ಉತ್ತರವಾಗಿ ಪರಿಣಮಿಸುತ್ತದೆ. ಇಂತಹ ಪದ್ಯವೇ "ಮಹಾಂತರ್ಲಾಪ")

ಉದಾಹರಣೆಗಾಗಿ ಆ ಪದ್ಯಗಳಲ್ಲೊಂದು :

ಕೀದೃಕ್ಕೂಪ ಇಹೋಜ್ಝ್ಯತೇ, ರಘುಕುಲಖ್ಯಾತಿಂವ್ಯಧಾತ್ಕಿಂ ಸದಃ।
ಕೀದೃಕ್ಷಂ ಕೃಪಣ ಪ್ರಭೋ, ರತಿತರಾಂ ದಾತುಃ ಕುಟೀ ಕೀದೃಶೀ॥
ಕೀದೃಕ್ಷಂ ಚಮರೀಕದಂಬಕ, ಮಹೋ ಕೀದೃಗ್ಗೃಹಂ ಪಾಪಿನಾಂ।
**ದುರ್ವಾರಾಮಯ ಶೋಕವಿಸ್ವರ ಮುಖಾ ಶೇಷೋಲ್ಲುಠದ್ವಾಲಕಮ್॥**

ಈ ಪದ್ಯದ ಕೊನೆಯ ಪಾದವನ್ನು

ದುರ್ವಾಃ, ರಾಮಯಶಃ, ಅಕವಿಸ್ವರಂ, ಉಖಾಶೇಷಾ, ಉಲ್ಲುಠದ್ವಾಲಕಮ್ ಎಂದು ವಿಭಜಿಸಿದರೆ ಅವು ಪದ್ಯದ ಮೂರು ಪಾದಗಳಲ್ಲಿರುವ ಮೊದಲಿನ ಐದು ಪ್ರಶ್ನೆಗಳಿಗೆ ಉತ್ತರವಾಗುತ್ತವೆ. ಪೂರ್ತಿ ಕೊನೆಯ ಪಾದ ಕೊನೆಯ ಪ್ರಶ್ನೆಗೆ ಉತ್ತರ.

ಕೀದೃಕ್ಕೂಪ ಇಹೋಜ್ಝ್ಯತೇ (ಎಂತಹ ಬಾವಿಯನ್ನು ತ್ಯಜಿಸುತ್ತಾರೆ?

ಉತ್ತರ- ದುರ್ವಾಃ = ಕೆಟ್ಟ ನೀರಿರುವುದನ್ನು
ರಘುಕುಲಖ್ಯಾತಿಂವ್ಯಧಾತ್ಕಿಂ? (ಯಾವುದು ರಘುವಂಶಕ್ಕೆ ಖ್ಯಾತಿಯನ್ನು ತಂದಿತು?
ಉತ್ತರ- ರಾಮಯಶಃ = ರಾಮನ ಯಶಸ್ಸು
ಸದಃ ಕೀದೃಕ್ಷಂ ಕೃಪಣ ಪ್ರಭೋಃ = ಜಿಪುಣನಾದ ರಾಜನ ಸಭೆ ಹೇಗಿರುತ್ತದೆ?
ಉತ್ತರ- ಅಕವಿಸ್ವರಂ = ಕವಿಗಳ ಸ್ವರರಹಿತವಾಗಿ
ಅತಿತರಾಂ ದಾತುಃ ಕುಟೀಕೀದೃಶೀ = ಬಹಳ ದಾನಿಯಾದವನ ಮನೆ ಹೇಗಿರುತ್ತದೆ?
ಉತ್ತರ- ಉಖಾಶೇಷ - ಬರಿಯ ಮಡಕೆಗಳು ಮಾತ್ರ ಉಳಿದಿರುವುದಾಗಿ
ಕೀದೃಕ್ಷಂ ಚಮರೀ ಕದಂಬಕಂ = ಚಮರೀ ಮೃಗಗಳ ಗುಂಪು ಹೇಗೆ ಕಾಣಿಸುತ್ತದೆ?
ಉತ್ತರ- ಉಲ್ಲುಠದ್ವಾಲಕಂ = ಬಾಲದ ಕೂದಲು ಹಾರಾಡುತ್ತಾ
ಕೊನೆಯ ಪ್ರಶ್ನೆ - ಕೀದೃಗ್ಗ್ಲ ಹಂಪಾಪಿನಾಂ = ಪಾಪಿಷ್ಠರ ಮನೆ ಹೇಗಿರುತ್ತದೆ?
ಇದಕ್ಕೆ ಕೊನೆಯ ಪಾದ ಪೂರ್ತಿ ಉತ್ತರವಾಗುತ್ತದೆ.

ದುರ್ವಾರಾಮಯ ಶೋಕವಿಸ್ವರ ಮುಖಾ ಶೇಷೋಲ್ಲುಠದ್ವಾಲಕಮ್ = ವಾಸಿ ಮಾಡಲು ಅಸಾಧ್ಯವಾದ ರೋಗಗಳಿಂದ ವಿಕಾರವಾಗಿ ಅಳುತ್ತಿರುವ ಮುಖವುಳ್ಳ (ಮತ್ತು ಕಷ್ಟವನ್ನು ಸಹಿಸಲಾರದೆ) ಹೊರಳಾಡುತ್ತಿರುವ ಎಲ್ಲ ಮಕ್ಕಳಿರುವ ಮನೆಯಾಗಿರುತ್ತದೆ. (ವಬಯೋರಭೇದಃ = ವಕಾರ ಬಕಾರಗಳಿಗೆ ಭೇದವಿಲ್ಲವೆಂಬ ನ್ಯಾಯದಂತೆ ವಾಲಕ = ಬಾಲಕ = ಮಗು ಎಂಬರ್ಥವನ್ನು ಮಾಡಿದೆ)

ಸಮಸ್ಯಾಪೂರಣ ಶ್ಲೋಕಗಳು ಸಂಸ್ಕೃತದಲ್ಲಿ ಮಾತ್ರವಲ್ಲ, ಕನ್ನಡದಲ್ಲಿಯೂ ಹೇರಳವಾಗಿವೆ. ಬಿ.ಎಂ.ಶ್ರೀ. ಪ್ರತಿಷ್ಠಾನದ "ಕರ್ನಾಟಕಲೋಚನ" ಪತ್ರಿಕೆಯಲ್ಲಿ ಪ್ರತಿ ಸಂಚಿಕೆಯಲ್ಲೂ ಒಂದು ಸಮಸ್ಯೆಯನ್ನೂ, ಹಿಂದಿನ ಸಂಚಿಕೆಯಲ್ಲಿ ಕೊಟ್ಟಿದ್ದ ಸಮಸ್ಯೆಯ ಪೂರಣ ಪದ್ಯವನ್ನೂ ಪ್ರಕಟಿಸುತ್ತಾರೆ.

**"ದನಮಂ ಕೊಯ್ದೊಯ್ದು ಬಸದಿಯೊಳ್ ತಂದಿಟ್ಟರ್"** ಎಂಬುದೊಂದು ಸಮಸ್ಯೆ ಪುಸ್ತಕದಲ್ಲಿ ಅಚ್ಚಾಗಿರುವ ಪಾಠದಲ್ಲಿ 'ಬಸದಿಗೊಯ್ಯುತ್ತಿರ್ಪರ್' ಎಂದು ಇದೆ. (ಹಸುವನ್ನು ಕೊಂದು ಅದನ್ನು ತೆಗೆದುಕೊಂಡು ಹೋಗಿ (ಜೈನ) ಬಸದಿಯಲ್ಲಿಟ್ಟರು) ಎಂತಹ ಅಪಲಾಪವಿದು! ಪ್ರಾಣಿದಯೆಯನ್ನು ಅತಿಮುಖ್ಯವಾದ ಗುಣವಾಗಿ ಎಣಿಸುವ ಜೈನರು ಇಂತಹ ಕೆಲಸ ಮಾಡಿಯಾರೆ! ಈ ಕೊನೆಯ ಪಾದದ ಹಿಂದಿನ ಪಾದದ ಕೊನೆಯಲ್ಲಿ 'ಚಂ' ಎಂಬಕ್ಷರವಿದೆ. ಅದನ್ನು ಸೇರಿಸಿಕೊಂಡರೆ "ಚಂದನಮಂ ಕೊಯ್ದೊಯ್ದು ಬಸದಿಯೊಳ್ ತಂದಿಟ್ಟರ್" ಎಂದಾಗಿ "ಗಂಧದ ಮರವನ್ನು ಕತ್ತರಿಸಿ ತುಂಡನ್ನು ಬಸದಿಯಲ್ಲಿ ತಂದಿಟ್ಟರು" ಎಂಬ ಸಮಂಜಸಾರ್ಥವಾಗುತ್ತದೆ.

ಮೇಲಿನ ಸಮಸ್ಯೆ ಬಹಳ ಹಿಂದೆ ನನಗೆ ನಮ್ಮ ತಂದೆಯವರೋ, ಬೇರಾರೋ ಹಿರಿಯರೋ ಹೇಳಿದ್ದು - ಕಂತಿ ಹಂಪರ ಸಮಸ್ಯೆ ಎಂದು

೧೯೨೫ರಲ್ಲಿ ಮದರಾಸಿನಲ್ಲಿ ನನ್ನ ಮೊದಲ ವಿವಾಹವಾದಾಗ ಅಲ್ಲಿ "ಕಂತೀ ಹಂಪ ಸಮಸ್ಯೆಗಳು" ಎಂಬ ಅಚ್ಚಾದ ಪುಸ್ತಕದ ಪ್ರತಿಯನ್ನು ನೋಡಿದ್ದೆ. ಆಗ ನನಗೆ ಸಮಸ್ಯೆಗಳಲ್ಲಿ

ಅಭಿರುಚಿ ಅಷ್ಟಾಗಿರಲಿಲ್ಲವಾಗಿ ಪುಸ್ತಕ ಪಡೆಯಲು ಪ್ರಯತ್ನಿಸಲಿಲ್ಲ. ೧೯೪೦ರಲ್ಲಿ ನಾನು ಪುಣೆಗೆ ಹೋದ ಮೇಲೆ ಅಲ್ಲೊಬ್ಬ ಕನ್ನಡಿಗ ಮಿತ್ರರೊಡನೆ ಮಾತನಾಡುತ್ತಿರುವಾಗ ಈ ಪುಸ್ತಕದ ಹೆಸರು ಬಂತು. ಪುಸ್ತಕದ ಪ್ರತಿ ಪಡೆಯಲು ಮೈಸೂರಿಗೆ ಬರೆದು ಪ್ರಯತ್ನಿಸಿದರೂ ಸಿಕ್ಕಲಿಲ್ಲ. ಆಮೇಲೆ ಆ ವಿಷಯವೂ ಮರೆತು ಹೋಯಿತು. ಈಗ ೬೦ ವರ್ಷಕ್ಕೂ ಹೆಚ್ಚು ಕಾಲ ಕಳೆದ ಮೇಲೆ ಒಮ್ಮೆ ಶ್ರೀ ಎಸ್. ಶಿವಣ್ಣನವರೊಡನೆ ಮಾತನಾಡುವಾಗ ಆ ಪುಸ್ತಕ ತಮ್ಮಲ್ಲಿರುವಾಗಿ ಹೇಳಿ, ಅದನ್ನು ಪ್ರತಿ ಮಾಡಿಸಿಕೊಳ್ಳಲು ಅನುಮತಿಸಿ, ಪ್ರೊ॥ಎನ್. ಗೀತಾಚಾರ್ಯರಿಗೆ ಕೊಟ್ಟರು. ಅವರು ಜೆರಾಕ್ಸ್ ಪ್ರತಿ ಮಾಡಿಸಿಕೊಟ್ಟರು. ಇವರಿಬ್ಬರಿಗೂ ನನ್ನ ಕೃತಜ್ಞತೆಗಳು.

ಈಗ ಸಿಕ್ಕಿರುವ ಪುಸ್ತಕ ೧೯೫೩ರಲ್ಲಿ ಅಚ್ಚಾದದ್ದು. ಅದರ ಮೊದಲರಿಕೆಯಲ್ಲಿ ಡಿ. ಪದ್ಮನಾಭಶರ್ಮರು ಈ ಗ್ರಂಥ (ಮೂಲ ಮಾತ್ರ) ೧೮೯೩ ರಲ್ಲಿ ಚಾಮರಾಜನಗರದಲ್ಲಿ ಅಚ್ಚಾಗಿತ್ತೆಂದು ಹೇಳಿದ್ದಾರೆ. ಈಗ ಅಚ್ಚಾಗಿರುವ ಪ್ರತಿಯಲ್ಲಿ ೫೩ ಸಮಸ್ಯೆಗಳಿವೆ. ಇವುಗಳಲ್ಲಿ ೪೫ ಸಮಸ್ಯಾಪೂರಣ ಪದ್ಯಗಳು.

ಪದ್ಮನಾಭ ಶರ್ಮರು ತಮ್ಮ ಗ್ರಂಥದ ಆದಿಯಲ್ಲಿ ಕಂತಿ ಎಂಬುವಳು, ನಾಗಚಂದ್ರನ ಆಶ್ರಯದಾತನಾದ ದೋರರಾಯನ ಆಸ್ಥಾನದಲ್ಲಿದ್ದ ದೇವಚಂದ್ರನ ಪಾಠಶಾಲೆಯಲ್ಲಿ ಸೇವಕಿಯಾಗಿದ್ದಳೆಂದೂ, ಅವನು ಶಿಷ್ಯರಿಗೆ ಬುದ್ಧಿವರ್ಧನಕ್ಕಾಗಿ ತೊಟ್ಟು ತೊಟ್ಟಾಗಿ ಕೊಡುತ್ತಿದ್ದ ಜ್ಯೋತಿಷ್ಮತೀ ತೈಲದ ಪಾತ್ರೆಯನ್ನು ಕಂಡು ಸ್ವಲ್ಪ ಸೇವಿಸಿ, ಅದು ರುಚಿಯಾಗಿದ್ದುದರಿಂದ ಅಷ್ಟನ್ನೂ ಕುಡಿದುಬಿಟ್ಟು ಅಪ್ರತಿಮ ವಿದುಷಿಯಾದಳೆಂದೂ ಹೇಳಿದ್ದಾರೆ. (ಪುಟ೭) "ಕಂತಿಗೂ ಪಂಪನಿಗೂ ನಡೆದ ವಾದಗಳಿಗೆ ಸಂಬಂಧಪಟ್ಟ ಕಂದ ಪದ್ಯಗಳನ್ನು ರಚಿಸಿದವರು ಯಾರೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಅದಕ್ಕೆ ಸರಿಯಾದ ಆಧಾರವೂ ಯಾವುದೂ ಇದುವರೆಗೆ ದೊರೆತಿಲ್ಲ. ಱಳಕುಳಾಕ್ಷರಗಳ ಪ್ರಯೋಗವನ್ನು ನೋಡಿದರೆ ಈ ಪದ್ಯಗಳು ೧೨ನೇ ಶತಮಾನದ್ದಾಗಿರಬಹುದೆಂದು ಊಹಿಸಲವಕಾಶವಿದೆ. ಮತ್ತು ಕೆಲವು ಪದ್ಯಗಳ ಶೈಲಿಯ ಸ್ವರೂಪ ಕ್ರಿ.ಶ. ೧೬-೧೭ನೇ ಶತಮಾನಗಳಂತೆ ತೋರುತ್ತದೆ" ಎಂದೂ "ಕಂತಿಯಿಂದ ರಚಿತವಾದ ಗ್ರಂಥಗಳಾವುವೂ ಉಪಲಬ್ಧವಿಲ್ಲ. ಆದರೂ ಕಂತಿ ಎಂಬ ಕವಯಿತ್ರಿ ಇದ್ದುದು ನಿಜ. ಆಕೆಯನ್ನು ಬಾಹುಬಲಿ ಮುಂತಾದ ಕವಿಗಳು ಸ್ತುತಿಸಿರುವುದೇ ಆಧಾರ" ಎಂದೂ ಬರೆದಿದ್ದಾರೆ. ಬಾಹುಬಲಿ ತನ್ನ ನಾಗಕುಮಾರ ಚರಿತದಲ್ಲಿ ಹೀಗೆ ಹೇಳಿದ್ದಾನೆ :

"ವಿಬುದ ಜನಸ್ತುತ ಶ್ರೀ ವೀರದೋರನ ಸಭೆಗೆ ಮಂಗಳಲಕ್ಷ್ಮಿಯೆನಿಪ।
ಶುಭಗುಣಚರಿತೆ ಕಂತಿಕೆಯರ ಪೊಗಟ್ಟೆನಾನಭಿನವವಾಗ್ದೇವಿಯರ॥

ಈಗ ಗ್ರಂಥದ ಮೂರು ಸಮಸ್ಯಾ ಪದ್ಯಗಳನ್ನು ನಿರೂಪಿಸಲು ಅಪೇಕ್ಷಿಸುತ್ತೇನೆ

೧. **<u>ಇಲಿಯಂ ತಿಂಬುದನು ಕಂಡೆ ಜೈನರಮನೆಯೊಳ್ (ಸಮಸ್ಯೆ)</u>**

ಬಲಮುರಿಂಮೆಡಮುರಿದೋರ್ವಳು।
ಮಲಸದಯನುವಾಗಿ ಎಣ್ಣೆಬಾಳಲೆಯೊಳಗಂ॥ (ಣ ?)
ತಿಲತೈಲದೆ ಮಾಡಿಯುಚಿ।
<u>ಕ್ಕಲಿಯಂ ತಿಂಬುದನು ಕಂಡೆ ಜೈನರಮನೆಯೊಳ್</u> ॥ ಪದ್ಯ ೫

(ಒಬ್ಬಳು ಮೊದಲು ಬಲಗಡೆಗೆ ಸುತ್ತು ಬರುವಂತೆಯೂ, ಅನಂತರ ಎಡಕ್ಕೆ ಸುತ್ತು ಬರುವಂತೆಯೂ, ಬೇಸರವಿಲ್ಲದೆ ಸರಿಯಾಗಿ ಎಣ್ಣೆಬಾಣಲೆಯಲ್ಲಿ ಎಳ್ಳೆಣ್ಣೆಯಲ್ಲಿ (ಕರಿದು) ಮಾಡಿದ ಚಕ್ಕಲಿ (ಚಕ್ಕುಲಿ)ಯನ್ನು ತಿನ್ನುವುದನ್ನು ಜೈನರ ಮನೆಯಲ್ಲಿ ಕಂಡೆ)

೨. **<u>ಮೊಕದೊಳೆ ದೀವಿಗೆಯ ಹಚ್ಚಿ ಸಂತೋಷಿಸುವರ್ (ಸಮಸ್ಯೆ)</u>**

(ಬಾಯೊಳಗೆ ದೀಪಹಚ್ಚಿ ಸಂತೋಷಿಸುವರು)
ಮುಕಮಂಟಪದೊಳ್ ವಿಲಸಿತ।
ಮುಕುರಗಳಂ ಕಟ್ಟಿ ದೇವಬಿಂಬಗಳಿಟ್ಟುಂ॥
ಸಕಲ ವಿಭವಗಳಿಂದಭಿ।
<u>ಮೊಕದೊಳೆ ದೀವಿಗೆಯ ಹಚ್ಚಿ ಸಂತೋಷಿಸುವರ್</u>॥ ಪದ್ಯ ೬

(ಬಸದಿಯ ಮುಂಭಾಗದಲ್ಲಿರುವ ಮಂಟಪದಲ್ಲಿ ಹೊಳೆಯುವ ಕನ್ನಡಿಗಳ; ಕಟ್ಟಿ, ದೇವರ ಮೂರ್ತಿಗಳನ್ನಿಟ್ಟು ಸಕಲ ವೈಭವಗಳಿಂದ ಎದುರಿಗೆ (ಅಭಿಮೊಕದೊಳೆ) ದೀಪಗಳನ್ನು ಹಚ್ಚಿ ಆನಂದ ಪಡುತ್ತಾರೆ.

೩. **<u>ಯಿಸಮಂ ಸೇವಿಸುತ ಬಾಟ್ದರೇನಚ್ಚರಿಯೋ (ಸಮಸ್ಯೆ)</u>**

(ವಿಷವನ್ನು ತಿನ್ನುತ್ತ ಬಾಳುತ್ತಿದ್ದರು. ಎಂತಹ ಆಶ್ಚರ್ಯ!)
ರಸಬಾಳೆಯ ಕಬ್ಬಿನೊಳಂ।
ರಸವಂ ತೆಗೆದಲ್ಲಿ ಗೋಧಿನುಚ್ಚುಗಳಿಟ್ಟುಂ॥
ಬಿಸಿಮಾಟ್ದಿತುಪ್ಪದೊಳು ಪಾ।
**ಯಿಸಮಂ ಸೇವಿಸುತ ಬಾಟ್ದರೇನಚ್ಚರಿಯೋ ॥ ಪದ್ಯ ೨೩**

(ರಸದಾಳೆ ಕಬ್ಬಿನ ರಸವನ್ನು ತೆಗೆದು ಅದರಲ್ಲಿ ಗೋಧಿಯ ನುಚ್ಚನ್ನು ತುಪ್ಪದಲ್ಲಿ ಹುರಿದು ಸೇರಿಸಿ ಮಾಡಿದ ಪಾಯಸವನ್ನು ತಿನ್ನುತ್ತ ಬಾಳಿದರು. ಏನಾಶ್ಚರ್ಯ?)

ಸಮಸ್ಯಾಪೂರಣ ವಿಷಯಕವಾದ ಗ್ರಂಥಗಳಾವುವೂ ನನಗೆ ನೋಡಲು ಸಿಕ್ಕಿರಲಿಲ್ಲ. ಇರಬೇಕು, ಆದರೆ ನನಗೆ ತಿಳಿಯದು. ಅವಧಾನಿ ಡಾ॥ ಗಣೇಶರವರು ತಮ್ಮ ಅವಧಾನ ಕಾರ್ಯಕ್ರಮಗಳಲ್ಲಿ ಸಮಸ್ಯಾಪೂರಣವನ್ನೂ ಒಂದು ಮುಖ್ಯ ಅಂಗವಾಗಿ ಇಟ್ಟುಕೊಂಡಿರುತ್ತಾರೆ. ಆ ಕಾರ್ಯಕ್ರಮಗಳಲ್ಲಿ ಅವರಿಗೆ ಕೊಟ್ಟ ಸಮಸ್ಯೆಗಳು ಮತ್ತು ಅವುಗಳ ಪೂರಣಗಳ ಪುಟ್ಟ ಪುಸ್ತಕವನ್ನು ಕೆಲವು ರಸಿಕ ಮಿತ್ರರು ಅಚ್ಚು ಹಾಕಿಸಿದ್ದಾರೆಂದು ಕೇಳಿದ್ದೇನೆ. ಶ್ರೀಯುತರು "ಕನ್ನಡದಲ್ಲಿ ಅವಧಾನ ಕಲೆ" ಎಂಬ ದೊಡ್ಡ ಪುಸ್ತಕವನ್ನು ರಚಿಸಿದ್ದು, ಅದರ ಪ್ರತಿಗಳೆಲ್ಲ ಮುಗಿದು ಹೋದುದರಿಂದ ಈಗ ಅದು ಲಭ್ಯವಿಲ್ಲ. ಅದನ್ನು ಪುನರ್ಮುದ್ರಣ ಮಾಡಿಸಿದರೆ ಸಹೃದಯ ರಸಿಕರಿಗೆ ಸಂತೋಷವಾಗುತ್ತದೆ. ನನ್ನ ಕೋರಿಕೆಯನ್ನು ಮನ್ನಿಸಿ ಈಗ ತಾನೇ ಗಣೇಶರವರು ಆ ಪುಸ್ತಕವನ್ನು ಅಧ್ಯಯನ ಮಾಡಲು ನನಗೆ ತಂದು ಕೊಟ್ಟಿದ್ದಾರೆ. ಕನ್ನಡ ಭಾಷೆಯಲ್ಲಿ "ಕನ್ನಡದಲ್ಲಿ ಅವಧಾನ ಕಲೆ"ಯು ಒಂದು ಮಹದ್ಗ್ರಂಥ. ಮಹಾಭಾರತದ ವಿಷಯದಲ್ಲಿ "ಮಹತ್ವಾದ್ಭಾರವತ್ವಾಚ್ಚ ಮಹಾಭಾರತ ಮಿಷ್ಯತೇ ಮಹತ್ವದಿಂದಲೂ ಮತ್ತು ಭಾರವಾಗಿರುವುದರಿಂದಲೂ ವಿಷಯಗಳ ಸಾರ (ಸ್ಥಿರಾಂಶ)ದಿಂದ ಮಾತ್ರವಲ್ಲ, ಪುಸ್ತಕಗಳ ಎಲ್ಲ ಸಂಪುಟಗಳ ತೂಕದಿಂದಲೂ ಸಹ) ಎನ್ನುವ ವಿದ್ವದ್ವಾಣಿಯಂತೆ ಈ ಗ್ರಂಥವೂ ಸಹ 'ಭಾರ'ವಾದ ಗ್ರಂಥ. ಓದಿ ಜೀರ್ಣಿಸಿಕೊಳ್ಳಬೇಕಾದರೆ, ತಕ್ಕಷ್ಟು ಪ್ರತಿಭೆಯೂ ಕಾಲಾವಕಾಶವೂ ಸಹ ಬೇಕು.

ಈ ಗ್ರಂಥದ ೫ನೆಯ ಅಧ್ಯಾಯದಲ್ಲಿ 'ಸಮಸ್ಯಾಪೂರಣ' ವಿಷಯಕವಾದ ೩೬ ಪುಟಗಳಷ್ಟು ದೀರ್ಘ ಪರಿಚ್ಛೇದವಿದೆ. (ಪುಟ ೧೨೦-೧೫೬) ಹೆಚ್ಚು ತಿಳಿಯಲಪೇಕ್ಷಿಸುವವರು ಇದನ್ನು ಸಾವಧಾನದಿಂದ ಪರಿಶೀಲಿಸಬೇಕು. ಇಲ್ಲಿ ಆ ಗ್ರಂಥದಲ್ಲಿರುವ ಕೆಲವು ಸಮಸ್ಯಾಪೂರಣಗಳನ್ನು ಕೊಡುತ್ತಿದ್ದೇನೆ.

೧. ಸಮಸ್ಯೆ - <u>ರಾವಣನವನಿಜೆಯಕಾಂತ ನಿಳೆಯಂ ಪೊರೆವಂ</u> (ಪುಟ ೧೨೩)

ಭೂಪುತ್ರಿಯಾದ ಸೀತೆಯ ಪ್ರಿಯನಾದ ರಾವಣನು ಭೂಮಿಯನ್ನು ಕಾಪಾಡುತ್ತಾನೆ ಎಂಬ ಅಪಾರ್ಥವಿಲ್ಲದೆ. ಹಿಂದಿನ ಸಾಲಿನ ಕೊನೆಯಲ್ಲಿ ನಿರ್ಜಿತ ಎಂಬ ಪದ ಬರುವಂತೆ ಪದ್ಯ ರಚಿಸಿ 'ನಿರ್ಜಿತ ರಾವಣ'ನೆಂದರೆ ರಾವಣನನ್ನು ಸೋಲಿಸಿದ ರಾಮ ಎಂದು ಸಮಂಜಸಾರ್ಥ ಬರುವಂತೆ ಪೂರಣ

ಶ್ರೀವಾಗ್ಬಲಸಂಪೂರ್ಣಂ
ದೇವಂ ಸಾಕೇತನಾಥನಾದಿ ಕವಿನುತಂ।
ಪಾವನನಾಮಂ ನಿರ್ಜಿತ
**<u>ರಾವಣನವನಿಜೆಯಕಾಂತ ನಿಳೆಯಂ ಪೊರೆವಂ</u> ॥**

(ಸಂಪತ್ತು ಮತ್ತು ಅಪಾರ ಆಜ್ಞಾಶಕ್ತಿಯುತನಾದ, (ಜಪಿಸುವವರನ್ನು) ಪಾವನಗೊಳಿಸುವ ಹೆಸರುಳ್ಳ ಭೂಪುತ್ರಿ (ಸೀತೆ)ಯ ಪ್ರಿಯನಾದ ಸಾಕೇತ (ಅಯೋಧ್ಯಾ) ನಗರದ ಅರಸಾದ ಆದಿಕವಿ (ವಾಲ್ಮೀಕಿ)ಯಿಂದ ಸ್ತುತನಾದ ಮತ್ತು ರಾವಣನನ್ನು ಸೋಲಿಸಿದ ದೇವ (ರಾಮ)ನು ಭೂಮಿಯನ್ನು ಕಾಪಾಡುತ್ತಾನೆ.

**೨. ಸಮಸ್ಯೆ - <u>ಮಜವಾಗಿರು ನೀನೆನುತ್ತೆ ಶಪಿಪಂ ಮುನಿಪಂ (ಪುಟ೧೨೪)</u>**

ನೀನು ಮಜವಾಗಿರು ಎಂದು ಹೇಳಿದರೆ ಆಶೀರ್ವಾದವಾಯಿತು. ಅದು ಹೇಗೆ ಶಾಪವಾಗುತ್ತದೆ? ಹಿಂದಿನ ಸಾಲಿನ ಕೊನೆಯಲ್ಲಿನ ೫ ಅಕ್ಷರಗಳನ್ನು ಸೇರಿಸಿಕೊಂಡರೆ 'ಮದಭರ ಸಾಮಜವಾಗಿರು' (ಮದ್ದಾನೆಯಾಗಿರು) ಎಂದು ಇಂದ್ರದ್ಯುಮ್ನ ರಾಜನಿಗೆ ಕೊಟ್ಟ ಶಾಪವಾಗುತ್ತದೆ. ಹೀಗೆ ಶಂಕಾ ಪರಿಹಾರ.

ಭಜನಗತೇಂದ್ರ ದ್ಯುಮ್ನಂ
ನಿಜಮನ್ನಣೆಯೀಯಲಿಲ್ಲೆನುತ್ತುರಿದಾ ಕುಂ-
ಭಜನವಗಂ ಮದಭರಸಾ
**<u>ಮಜವಾಗಿರು ನೀನೆನುತ್ತೆ ಶಪಿಪಂ ಮುನಿಪಂ</u> ॥**

ದೇವತಾಭಜನೆಯಲ್ಲಿ (ಮೈ ಮರೆತಿದ್ದ) ಇಂದ್ರದ್ಯುಮ್ನನು ತನಗೆ ತಕ್ಕ ಸತ್ಕಾರ ಮಾಡಲಿಲ್ಲವೆಂದು ಕೋಪಗೊಂಡ ಕುಂಭಜ (-ಅಗಸ್ತ್ಯ ಮಹಾಮುನಿಯು ಅವನನ್ನು ನೀನು ಮದ್ದಾನೆಯಾಗಿ ಹೋಗು ಎಂದು ಶಪಿಸಿದನು)

**೩. ಸಮಸ್ಯೆ - ರಂಭಾನಂದದೆ ರಾಮನಿರ್ದುದಕೆ ಸೀತಾದೇವಿಯೇ ಕಾರಣಂ (ಪುಟ೧೨೬)**

(ರಾಮನು ರಂಭೆಯೊಡನೆ ಆನಂದವಾಗಿದ್ದುದಕ್ಕೆ ಸೀತಾ ದೇವಿಯೇ ಕಾರಣ)

ಏಕಪತ್ನಿವ್ರತಸ್ಥನಾದ ರಾಮನು ದೇವ ವೇಶ್ಯೆ ರಂಭೆಯೊಡನೆ ಆನಂದವಾಗಿದ್ದುದು ಯಾವಾಗ? ಗಂಡನು ಪರನಾರಿಯೊಡನೆ ಸಂಗ ಮಾಡಿದರೆ ಸೀತೆಯಂತಹ ಪತಿವ್ರತೆ ಕೂಡ

ಸಹಿಸಿಯಾಳೆ? ಅವಳು ಇದಕ್ಕೆ ಹೇಗೆ ಕಾರಣ ಇತ್ಯಾದಿ ಪ್ರಶ್ನೆಗಳ ಸರಮಾಲೆಯೇ ಏಳುತ್ತದೆ. ಸಮಸ್ಯಾಪೂರಣ ಇವನ್ನು ಪರಿಹರಿಸುತ್ತದೆ.

ಪೂರಣ - ಜಂಭಾರಾತಿವಿರೋಧಿಯಂ ಗೆಲಿದನಾ ಸೌಮಿತ್ರಿ, ರಕ್ಷಶ್ಚಮೂ
ದಂಭಾಂತ್ಯರ್ಗಡ ವಾನರೋತ್ತಮರೆನಲ್, ಲಂಕೇಶನಂ ನೀಚನಂ।
ಕುಂಭೋದ್ಭೂತನ ಮಂತ್ರದಿಂ ಸ್ವಬಲದಿಂ ಗೆಲ್ದಿಂತು ಸಂಗ್ರಾಮಸಂ-
**ರಂಭಾನಂದದೆ ರಾಮನಿರ್ದುದಕೆ ಸೀತಾದೇವಿಯೇ ಕಾರಣಂ ॥**

ಜಂಭಾಸುರನ ಶತ್ರು (ಇಂದ್ರ) ವಿರೋಧಿಯಾದ ಇಂದ್ರಜಿತ್ತನ್ನು ಗೆದ್ದನು ಲಕ್ಷ್ಮಣ. ರಾಕ್ಷಸ ಸೇನೆಯನ್ನು ವಾನರೋತ್ತಮರು ಕೊನೆಗಾಣಿಸಿದರು. ನೀಚನಾದ ಲಂಕಾಪತಿಯನ್ನು ಅಗಸ್ತ್ಯನ ಮಂತ್ರ ಪ್ರಭಾವದಿಂದಲೂ ತನ್ನ ಬಲದಿಂದಲೂ ಗೆದ್ದು, ಯುದ್ಧ ಸಂಭ್ರಮ (ಸಂರಂಭ) ದಲ್ಲಿನ ಆನಂದದಿಂದ ರಾಮನಿದ್ದುದ್ದಕ್ಕೆ ಸೀತಾದೇವಿಯೇ ಕಾರಣ.

ಗ್ರಂಥದಲ್ಲಿರುವ ಸಮಸ್ಯಾಪೂರಣಗಳಲ್ಲಿ ಬಹುಭಾಗ ಗಣೇಶರವರದ್ದೇ, ಹೀಗೆ ಕೊಡುತ್ತಾ ಹೋದರೆ ಓದುವವರಿಗೆ ಇನ್ನೂ ಕೊಡಲಿ ಎಂಬ ಅಪೇಕ್ಷೆಯುಂಟಾಗುವುದು ಸಹಜ. ಆದರೆ ಸ್ಥಳ ಪರಿಮಿತಿಯಿಂದಾಗಿ ಇಲ್ಲಿಗೆ ನಿಲ್ಲಿಸಿದ್ದೇನೆ.

'ಕರ್ನಾಟಕಲೋಚನ'ಕ್ಕೆ ಈ ಲೇಖನವನ್ನು ಕೊಡಲು ಹೇಳಿದ ಬಿ.ಎಂ.ಶ್ರೀ. ಪ್ರತಿಷ್ಠಾನದ ಪ್ರಾಧ್ಯಾಪಕ ಶ್ರೀ ಗೀತಾಚಾರ್ಯರಿಗೂ ದಯವಿಟ್ಟು ಲೇಖಕನಿಗೆ ಗ್ರಾಸವನ್ನು ಒದಗಿಸಿದ ಡಾ॥ ಗಣೇಶರವರಿಗೂ ಕೃತಜ್ಞತಾಪೂರ್ವಕ ಧನ್ಯವಾದಗಳನ್ನರ್ಪಿಸುತ್ತೇನೆ. ■

---

(ಹಿಂದಿನ ಸಂಚಿಕೆಯಲ್ಲಿ ಕಾರಾಣಾಂತರದಿಂದ ಸಮಸ್ಯಪೂರಣ ಅಂಕಣಕ್ಕೆ ಸಮಸ್ಯೆಯನ್ನು ಸೂಚಿಸದಿದ್ದುದರಿಂದ ಈ ಸಂಚಿಕೆಯಲ್ಲಿ ಈ ವಿಚಾರದ ಬಗ್ಗೆ ಪ್ರಸ್ತುತ ಲೇಖನವನ್ನು ಪ್ರಕಟಿಸಲಾಗಿದೆ.- *ಸಂ)*

**ಮುಂದಿನ ಸಂಚಿಕೆಯ ಸಮಸ್ಯೆ**

'ಮಜವಾಗಿರು ನೀನೆನುತ್ತ ಶಪಿಪಂ ಮುನಿಪಂ'

***ಸೂಚನೆ - ಶತಾವಧಾನಿ ಆರ್. ಗಣೇಶ್***

# ಲೋಕೋಪಕಾರಂ - ಒಂದು ಅವಲೋಕನ

*- ವಾಲ್ಮೀಕಿ ಶ್ರೀನಿವಾಸ ಅಯ್ಯಂಗಾರ್*

ಸುಮಾರು ಹನ್ನೊಂದನೆಯ ಶತಮಾನ (ಶಾಲಿವಾಹನ ಶಕ ೯೪೭; ಕ್ರಿಸ್ತಶಕ ೧೦೨೫) ದಲ್ಲಿ ಚಾವುಂಡರಾಯನೆಂಬ ಕವಿಯಿಂದ ರಚಿತವಾಗಿರುವ, ಹನ್ನೆರಡು ಅಧ್ಯಾಯಗಳಿಂದ ಕೂಡಿರುವ, ಹಲವಾರು ಲೌಕಿಕ - ವಾಸ್ತವಿಕ ವಿಚಾರಗಳನ್ನೊಳಗೊಂಡಿರುವ ಈ 'ಲೋಕೋಪಕಾರಂ' ಎಂಬ ಪುಸ್ತಕವು ಈಗ ಸುಲಭವಾಗಿ ದೊರೆಯುವುದಿಲ್ಲ. ಕರ್ನಾಟಕದ ಗ್ರಂಥಾಲಯಗಳಲ್ಲಿ ಈ ಪುಸ್ತಕದ ಪ್ರತಿಗಳು ಲಭಿಸುವುದು ಅಪರೂಪ. ದೊರೆತರೂ ಸಹ ಅದು ಜೀರ್ಣಾವಸ್ಥೆಯಲ್ಲಿರುವುದು ಸಹಜವು. ನಾಲ್ಕು ಹಸ್ತಲಿಖಿತ ಪ್ರತಿಗಳ ಆಧಾರದಿಂದ ಶೇಷಯ್ಯಂಗಾರ್ ಎಂಬುವರಿಂದ ಸಂಪಾದಿಸಲ್ಪಟ್ಟು, ಮದರಾಸಿನ ಪುರಾತನ ಹಸ್ತಪ್ರತಿಗಳ ಸರಕಾರೀ ಗ್ರಂಥಾಲಯದಿಂದ ಕ್ರಿಸ್ತಶಕ ೧೯೫೦ರಲ್ಲಿ ಮುದ್ರಿತವಾಗಿ ಪ್ರಕಟವಾಗಿರುವ ಏಕೈಕ ಆವೃತ್ತಿಯಾಗಿರುವ ಈ ಪುಸ್ತಕವನ್ನು ಯಾರಾದರೂ ಈಗಿನ ಕನ್ನಡ ಬಲ್ಲವರು ಓದಲಾರಂಭಿಸಿದರೆ ಅವರಿಗೆ ಪುಸ್ತಕದ ವಿಷಯಗಳು ಅರ್ಥವಾಗುವುದು ಬಹುಶಃ ಅತಿ ಕಷ್ಟವಾಗಬಹುದು. ಆಂಗ್ಲ ಕನ್ನಡ ಅಥವಾ ಕನ್ನಡಾಂಗ್ಲ ಭಾಷೆ ತಿಳಿದಿರುವವರಿಗೆ ಇದು ಅರ್ಥವಾಗದಂತಹ ಗ್ರಂಥವಾಗಲೂಬಹುದು. ಬಹುಪಾಲು ಜನರು ಇದರ ಹಳಗನ್ನಡದ ಕಾವ್ಯ, ಟೀಕೆ ಶೈಲಿಗಳನ್ನು ಓದಲಾಗದೇ, ಓದುವುದು ನಿರರ್ಥಕವೆಂದು ಮೊದಲೇ ಕೈಬಿಡುವುದು ಅಸಹಜವಾಗುವುದೇನೂ ಅಲ್ಲ. ಈ ಪುಸ್ತಕದ ಅಂತರ್ವಿಷಯವನ್ನು ಅರಿಯಲು ಕೇವಲ ಹಳಗನ್ನಡ ಜ್ಞಾನವಷ್ಟೇ ಸಾಲದು. ನಮ್ಮ ಭಾರತೀಯ ಪರಂಪರೆಯ ಆಚಾರ, ವಿಚಾರ, ಸಂಪ್ರದಾಯಗಳ ಸಂಪೂರ್ಣ ಅರಿವು-ಆಧಾರಗಳಿರಬೇಕು. ನಮ್ಮನಾಡಿನ ಭೂಗೋಳ, ಚರಿತ್ರೆ, ಖಗೋಳಶಾಸ್ತ್ರ, ಪಾಕಶಾಸ್ತ್ರ, ವೃಕ್ಷ-ಸಸ್ಯಶಾಸ್ತ್ರ, ಕೃಷಿಯ ಬದುಕು, ಪಶು-ಪ್ರಾಣಿಗಳೊಡನೆ ಒಡನಾಟ, ಜನರು, ಸಾಕುಪ್ರಾಣಿಗಳು, ಕಾಡುಪ್ರಾಣಿಗಳು; ಮಳೆ-ಬೆಳೆ, ಅಜ್ಜಿಮದ್ದು, ಆಯುರ್ವೇದ, ಜ್ಯೋತಿಷ್ಯ, ವಾಸ್ತುಶಾಸ್ತ್ರ; ವೈವಾಹಿಕ ಕಟ್ಟಳೆಗಳು, ಸುಗಂಧ ದ್ರವ್ಯಗಳು, ವಿಷಹರ ಚಿಕಿತ್ಸೆ ಇತ್ಯಾದಿ ವಿಚಾರಗಳ ಅರಿವು ಓದುಗನಿಗಿದ್ದರೆ ಆಗ ಈ ಗ್ರಂಥದ ಬಹುಪಾಲು ವಿಷಯಗಳು ಅರ್ಥವಾಗುತ್ತವೆ. ೧೯೫೦ರಲ್ಲಿ ಪ್ರಕಟವಾಗಿರುವ ಮುದ್ರಿತ ಆವೃತ್ತಿಯ ನಂತರ ಈ ಪುಸ್ತಕದ ಮರು ಮುದ್ರಣವಾಗಲೀ, ಮರುಪ್ರಕಟಣೆಯಾಗಲೀ, ಹೊಸಗನ್ನಡದ ಗದ್ಯರೂಪಾರ್ಥವಾಗಲೀ ಈವರೆವಿಗೂ ಹೊರತರದಿರುವುದು ನಿಜಕ್ಕೂ ಮುಕ್ಕೋಟಿ ಕನ್ನಡಿಗರ ಸ್ವಾಭಿಮಾನ ಶೂನ್ಯತೆಯನ್ನು ಎತ್ತಿ ತೋರಿಸುತ್ತಿದೆಯೇನೋ ಎಂದು ಕಾಣುತ್ತದೆ. ಇತ್ತೀಚೆಗೆ ಸಿಕಂದರಬಾದಿನ ಏಷಿಯಾ ಕೃಷಿ ಚರಿತ್ರೆ ಪ್ರತಿಷ್ಠಾನದವರು ಈ ಗ್ರಂಥದ ಸಂಕ್ಷಿಪ್ತ ಆಂಗ್ಲಾನುವಾದದ ಆವೃತ್ತಿಯನ್ನು ತರುವಲ್ಲಿ ಕಾರ್ಯಪ್ರವೃತ್ತರಾಗಿರುವುದು ನಿಜಕ್ಕೂ ಪ್ರಶಂಸಾರ್ಹ ನಡವಳಿಕೆಯಾಗಿದೆ. ಇವರಿಂದಲಾದರೂ, ಈ ಕವಿ ಚಾವುಂಡರಾಯನ 'ಲೋಕೋಪಕಾರಂ', ಇಡೀ 'ಲೋಕ' ಎಂದರೆ 'ಜಗತ್ತಿ'ಗೆ ಉಪಕಾರವನ್ನು ಮಾಡುವತ್ತ ಒಂದು ಹೆಜ್ಜೆಯನ್ನಿಡಬಹುದೆಂಬ ಆಶಾಭಾವನೆಯುಂಟಾಗುತ್ತದೆ. ಕನ್ನಡಿಗರಲ್ಲದ, ಕನ್ನಡ ಜ್ಞಾನ ಸಾಕಷ್ಟು ಇಲ್ಲದಿದ್ದರೂ, ವಿಷಯ ಜ್ಞಾನದಾಹವನ್ನು ಇಂಗಿಸಲು ಸಂಸ್ಥೆಯವರು ಹೊರಟಿರುವುದು ನಿಜಕ್ಕೂ ಪ್ರಶಂಸಾರ್ಹವೇ ಆಗಿದೆ.

ಎಲ್ಲ ರೀತಿಯ ಲೌಕಿಕ ವ್ಯವಹಾರಗಳು, ಅವುಗಳ ದೋಷದಿಂದುಂಟಾಗುವ ಜನರ ಮೇಲಿನ ವಿಪರೀತ ಫಲಿತಾಂಶಗಳು, ಅವುಗಳ ನಿವಾರಣೋಪಾಯಗಳು ಇತ್ಯಾದಿ ವಿಷಯಗಳನ್ನು ಸ್ಪಷ್ಟವಾಗಿ ವಿವರಿಸುವ ಗ್ರಂಥವು ಅದೇಕೆ ಕನ್ನಡ ಸಾರಸ್ವತ ಲೋಕದಲ್ಲಿ ಈವರೆವಿಗೂ ಮೂಲೆಗುಂಪಾಗಿಹೋಗಿದೆಯೋ ಕಾಣದಾಗಿದೆ. ಬಹುಶಃ ಸಾರಸ್ವತ ಲೋಕದ ಈ ಅಸಡ್ಡೆಯಿಂದ ಜನರಿಗೆ ಸಾಕಷ್ಟು ನಷ್ಟವಾಗಿದೆಯೇ ವಿನಹ ಈ ಗ್ರಂಥವು ತನ್ನ ಶ್ರೇಷ್ಠತೆಯನ್ನು ಎಳ್ಳಷ್ಟೂ ಕಳೆದುಕೊಂಡಿಲ್ಲ, ಕಳೆದುಕೊಳ್ಳುವುದೂ ಇಲ್ಲ. ಈ ಗ್ರಂಥವನ್ನು ಇನ್ನೂ ಅಸಡ್ಡೆ ಮಾಡುವುದರಿಂದ, ಮುಕ್ಕೋಟಿ ಕನ್ನಡಿಗರಿಗೆ ಕಷ್ಟ-ನಷ್ಟಗಳುಂಟಾಗುವುದೇ ವಿನಹ, ಗ್ರಂಥವು ತನ್ನ ಹಿರಿಮೆಯನ್ನು ಕಳೆದುಕೊಳ್ಳುವುದೇ ಇಲ್ಲ. ಅದರ ಹಿರಿಮೆಯು ಕನ್ನಡಿಗರ ನಿರ್ಲಕ್ಷ್ಯದಿಂದ ಹೆಚ್ಚುತ್ತದೆಯೇ ವಿನಹ ಕುಗ್ಗುವುದಂತೂ ಸಾಧ್ಯವೇ ಇಲ್ಲ.

ಈ ಗ್ರಂಥವು ಹನ್ನೆರಡು ಅಧ್ಯಾಯಗಳನ್ನು ಹೊಂದಿದ್ದು, ಪ್ರತಿಯೊಂದು ಅಧ್ಯಾಯದ ವಿಷಯ-ವಿಚಾರಗಳೂ ಸಂಕ್ಷಿಪ್ತವಾಗಿ ಹೇಳಲ್ಪಟ್ಟಿವೆ. ಜ್ಯೋತಿಷ್ಯ, ಮುಹೂರ್ತ ಹಾಗೂ ವೈವಾಹಿಕ ವಿಚಾರಗಳು, ವಾಸ್ತುಶಾಸ್ತ್ರ, ಉತ್ಪಾತಗಳು, ಅಂತರ್ಜಲಜ್ಞಾನ, ವೃಕ್ಷಾಯುರ್ವೇದ, ಸುಗಂಧದ್ರವ್ಯಗಳು, ಸೂಪಶಾಸ್ತ್ರ, ನರಾದಿ ವೈದ್ಯಪ್ರಕರಣಗಳು, ವಿಷಹರ ಚಿಕಿತ್ಸೆ, ನರಾದಿಗಳ ಲಕ್ಷಣ-ಸ್ವರೂಪಗಳು ಮತ್ತು ಶಕುನಾದಿ ವರ್ಣನೆ, ಈ ವಿಷಯಗಳನ್ನೊಂಡಿರುವ ಈ ಗ್ರಂಥವು ವಾಸ್ತವವಾಗಿ 'ಲೋಕೋಪಕಾರ'ಕ್ಕಾಗಿ ರಚಿತವಾಗಿರುವ ಒಂದು ಪ್ರಾಚೀನ, ವೈಜ್ಞಾನಿಕ ಗ್ರಂಥವು ಎಂದರೆ, ಅದು ಅತಿಶಯೋಕ್ತಿಯಾಗಲಾರದು.

ಕವಿ ಚಾವುಂಡರಾಯನಿಂದ ರಚಿಸಲ್ಪಟ್ಟಿರುವ ಈ ಗ್ರಂಥವು, ಕವಿಯ ಮೂಲಕೃತಿಯೆಂದು ಮಾರುಹೋಗುವವರೇ ಹೆಚ್ಚು. ವಾಸ್ತವವಾಗಿ ಈ ಗ್ರಂಥವು ಈ ಹಿಂದೆಯೇ ರಚಿತವಾಗಿರುವ ಅನೇಕ ಪುರಾತನ ಗ್ರಂಥಗಳ ಹಳಗನ್ನಡಾವತರಣಿಕೆಯಷ್ಟೇ ಆಗಿದೆ. ವರಾಹಮಿಹಿರನಿಂದ ಸುಮಾರು ಆರನೆಯ ಶತಮಾನದಲ್ಲಿ ರಚಿತವಾಗಿರುವ 'ಬೃಹತ್ಸಂಹಿತೆ'ಯ ಸಂಕ್ಷಿಪ್ತ ಹಳಗನ್ನಡ ಅವತರಣಿಕೆಯು 'ಲೋಕೋಪಕಾರಂ' ಗ್ರಂಥವಾಗಿರಬೇಕೆಂಬ ಸಂಶಯವುಂಟಾಗುತ್ತದೆ. ಹಾಗೆಯೇ ಇದನ್ನು ಹಲವು ಪುರಾತನ ಸಂಸ್ಕೃತ ಗ್ರಂಥಗಳಾಗಿರುವ 'ವೃಕ್ಷಾಯುರ್ವೇದ', 'ಬೃಹಜ್ಜಾತಕ', 'ಗಾರ್ಗ್ಯ ಸಂಹಿತಾ', 'ಸಮಾಸ ಸಂಹಿತಾ', 'ಮಾಯಾಮತಂ' ಇತ್ಯಾದಿ ಗ್ರಂಥಗಳಿಂದಲೂ ಸಹ ವಿಷಯವನ್ನು ಹೆಕ್ಕಿ, ಇದರಲ್ಲಿ ಸಂಕ್ಷಿಪ್ತಗೊಳಿಸಲಾಗಿದೆ. ಯಾವ ವಿಧದಲ್ಲಿಯೂ 'ಲೋಕೋಪಕಾರಂ' ಗ್ರಂಥವು ಮೂಲ ವಿಷಯದಿಂದ ಕೂಡಿರುವುದಿಲ್ಲ. ಇದರ ವಿಷಯಗಳೆಲ್ಲವೂ ಹಿಂದೆ ಸಂಸ್ಕೃತ ಗ್ರಂಥಗಳಲ್ಲಿ ವಿಶದಪಡಿಸಿರುವ ವಿಷಯಗಳೇ ಆಗಿವೆ. 'ಬೃಹತ್ಸಂಹಿತೆ'ಯ ಅನೇಕ ಅಧ್ಯಾಯಗಳಲ್ಲಿ ಮೂಡಿರುವ ವಿಷಯಗಳು ಇದರಲ್ಲಿ ಸಂಕ್ಷಿಪ್ತವಾಗಿವೆ. ಸಂಸ್ಕೃತ ಭಾಷೆಯ ಬದಲಿಗೆ ಹಳಗನ್ನಡ ಭಾಷೆಯಿದೆಯಷ್ಟೆ. ಈ ವಿಷಯವನ್ನು ಕವಿ ಚಾವುಂಡರಾಯನೇ ಗ್ರಂಥದಲ್ಲಿ ಹಲವಾರು ಸ್ಥಳಗಳಲ್ಲಿ ತಿಳಿಸಿದ್ದಾನೆ. ಉದಾಹರಣೆಗೆ ನಾಲ್ಕನೆಯ ಅಧಿಕಾರದ 'ಉತ್ಪಾತಾಧ್ಯಾಯಂ'ನ ಮೂವತ್ತಾರನೆಯ ಸೂತ್ರದ ನಾಲ್ಕನೆಯ ಪಾದದಲ್ಲಿ 'ವರಾಹಸಂಹಿತೋಕ್ತಿಯಿಂ' ಎಂದು ಮೂಲದಲ್ಲಿ ಹೇಳಿದ್ದಾನೆ. ಹಾಗೆಯೇ ಟೀಕೆಯಲ್ಲಿಯೂ ಸಹ 'ಇದು ವರಾಹ ಸಂಹಿತೆ ಮತದಿಂದೆ ಪೇಟ್ಪ್ಪುದು' ಎಂದು ಹೇಳಲಾಗಿದೆ. ಹೀಗಿದ್ದರೂ ಸಹ, ಕನ್ನಡದಲ್ಲಿ ಮೊಟ್ಟಮೊದಲ ಬಾರಿಗೆ ಹನ್ನೊಂದನೆಯ ಶತಮಾನದಲ್ಲಿ ರಚಿತವಾಗಿರುವ ಈ ಗ್ರಂಥವು ಶ್ರೀಸಾಮಾನ್ಯನಿಗೆ ಬಹು ಉಪಕಾರಿಯಾಗಿದೆಯೆಂದರೆ ಯಾವ ತಪ್ಪೂ ಆಗಲಾರದು.

ಈಗ ಲಭ್ಯವಿರುವ ಏಕೈಕ ಮುದ್ರಿತಾವೃತ್ತಿಯಲ್ಲಿ ಅದರ ಸಂಪಾದಕ ಶೇಷಯ್ಯಂಗಾರ್‌ರವರು, ಅನೇಕ ಮಹತ್ತರ ವಿಚಾರಗಳನ್ನು ತಮ್ಮ ಮುನ್ನುಡಿಯಲ್ಲಿ ಹೊರಗೆಡಹಿರುವರಾದರೂ ಸಹ ಕೆಲವು ಮಹತ್ತರವಾದ ತಪ್ಪುಗಳನ್ನೂ ಸಹ ಎಸಗಿದ್ದಾರೆ. ಈ ತಪ್ಪನ್ನು ಸರಿಪಡಿಸಲೆಂದೇ ಈ ಚರ್ಚೆಯನ್ನು ಈಗ ಆರಂಭಿಸಲಾಗಿದೆ.

ಈ ಕವಿ ಚಾವುಂಡರಾಯನು ವೈದಿಕಮತದ ಅದ್ವೈತ ಪಂಗಡಕ್ಕೆ ಸೇರಿದ ಬ್ರಾಹ್ಮಣವರ್ಣದವನೆಂದೂ, ಹಾಗೂ ವೈದಿಕಸಂಪ್ರದಾಯಗಳನ್ನು ಈ ಗ್ರಂಥದಲ್ಲಿ ಉಲ್ಲೇಖಿಸಿರುವನೆಂದೂ ತಮ್ಮ ಪ್ರಸ್ತಾವನೆಯಲ್ಲಿ ತಿಳಿಸಿರುವ ಸಂಪಾದಕರು, ಗ್ರಂಥದ ixನೆಯ ಪುಟದಲ್ಲಿ 'ಅಂಬು'ಗಟಿ'ಯುವುದು ಎಂಬ ನಾಲ್ಕನೆಯ ಉತ್ಪಾತಾಧ್ಯಾಯದ ನಾಲ್ಕನೆಯ ಸೂತ್ರದಲ್ಲಿ ಹೇಳಿರುವ 'ಶಾಂತಿಕಾರ್ಯ'ವು ಇಂತಹುವುದೆಂದು ಸ್ಪಷ್ಟವಾಗಿ ಗ್ರಂಥದಿಂದಲೂ, ಟೀಕೆಯಿಂದಲೂ ತಿಳಿದುಬರುವುದಿಲ್ಲವೆಂದು ಹೇಳಿದ್ದಾರೆ. ಈ 'ಅಂಬುಗಟಿ''ಯುವುದು ನೇಮಿನಾಥ ಚರಿತ್ರದಲ್ಲಿ ವಿವರಿಸಿರುವ 'ಗೋಮುಖೀವ್ರತ'ವಾಗಿರಬೇಕೆಂದು, ಅನವಶ್ಯಕವಾಗಿ ಜೈನಸಂಪ್ರದಾಯದತ್ತ ತಮ್ಮ ವಿಚಾರ ಸರಣಿಯನ್ನು ತಿರುಗಿಸಿದ್ದಾರೆ. ಈ ಆಧಾರರಹಿತ ವಾದಕ್ಕೆ 'ಊರುಗೋಲೋ' ಎಂಬಂತೆ, ಇದೇ ಪುಟದ ಅಡಿಬರಹದಲ್ಲಿ 'ಜೈನಸಂಪ್ರದಾಯ'ದಲ್ಲಿ ಯಕ್ಷ-ಯಕ್ಷಿಯರ ದೇವತಾ ಪ್ರತಿಮೆಗಳು ವಾಡಿಕೆಯಾಗಿದೆ" ಎಂದೂ ತಿಳಿಸಿದ್ದಾರೆ.

ಶ್ರೀಯುತ ಶೇಷಯ್ಯಂಗಾರ್‌ರವರ ಈ ನಿರಾಧಾರ ವಾದಕ್ಕೆ ಅವರು 'ಲೋಕೋಪಕಾರಂ' ಗ್ರಂಥವನ್ನು ಮೂಲಗ್ರಂಥವೆಂದು ತಿಳಿದಿರುವುದೇ ಕಾರಣವಾಗಿರಬೇಕು. ಬಹುಶಃ ಈ ಗ್ರಂಥವು ಈ ಹಿಂದೆಯೇ ಪ್ರಚಲಿತವಾಗಿದ್ದ ವಿಷಯಗಳನ್ನು ಒಳಗೊಂಡಿರುವ 'ಬೃಹತ್ಸಂಹಿತೆ' ಇನ್ನಿತರ ಪುರಾತನ ಸಂಸ್ಕೃತ ಗ್ರಂಥಗಳ ಸಂಕ್ಷಿಪ್ತ ಹಳಗನ್ನಡದ ಅವತರಣಿಕೆ ಎಂಬುದನ್ನು ಅವರು ಮನಗಂಡಿಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಈ ಹುರುಳಿಲ್ಲದ ವಿಚಾರವನ್ನು ಕನ್ನಡ ಸಾರಸ್ವತ ಲೋಕಕ್ಕೆ ಮನದಟ್ಟು ಮಾಡಲು 'ಬೃಹತ್ಸಂಹಿತೆ'ಯ ಸಂಬಂಧಿತ ಸೂತ್ರಗಳನ್ನು ಇಲ್ಲೀಗ ಹೋಲಿಸುತ್ತೇನೆ.

ಈ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಸೂತ್ರ, ಟೀಕೆ ಹಾಗೂ ಹೊಸಗನ್ನಡದ ಗದ್ಯಾರ್ಥಗಳು ಹೀಗಿವೆ -

ತ್ರಿವಿಧೋತ್ಪಾತದೊಳುರ್ವಿನಾಭಸ ವಿಕಾರಂ ದೇವತಾಶಾಂತಿಯಿಂ
ದವೆ ಶಾಂತ್ಯಾವಹಮಲ್ಲಿ ದಿವ್ಯಮಗಿದಾ ದಿವ್ಯಕ್ಕೆ ಲೇಸಾಗಿ ಮಾ
ಟ್ಕೆ ವಿಶೇಷಂ ಕನಕಾನ್ನಗೋಕುಲಮಹೀದಾನಂಗಳಂ ಕೊಟ್ಟು ಹೋ
ಮವನೀಶಾನ್ಯ ದೊಳೊಯ್ದು ಱಂಖುಗಱ್‌ದಂದಾ ದೋಷಮುಂ ಪಿಂಗುಗುಂ ॥೪॥

ಟೀಕೆ -

ಪಿಂದೆ ಪೇಳ್ದ ಮೂಱುಂತೆಱದುತ್ಪಾತಂಗಳ್, ಶಾಂತಮಪ್ಪುದರ್ಕೆ ದೇವತಾ ಶಾಂತಿಯಂ ಮಾಳ್ಪುದು ಮೂಱನೆಯ ದಿವ್ಯಂ ಶಾಂತಮಪ್ಪುದರ್ಕೆ

ಸುವರ್ಣದಾನ, ಅನ್ನದಾನ, ಭೂದಾನ, ಗೋದಾನಂಗಳಂ ಚೆನ್ನಾಗಿ ಮಾಡಿ, ಈಶಾನ್ಯ ದಿಕ್ಕಿನಲ್ಲಿ ಹೋಮಮನುಪದ್ರವಪ್ರೀತಿಯಾಗಿ ಮಾಡುವುದು - ಈ ಮೂ ಱುಂತೆಱದುತ್ಪಾತಂಗಳುಂ ಶಾಂತಮಪ್ಪವು. ಈ ಮೂಱುಂತೆಱದ ಉತ್ಪಾತಂಗಳೊಳಗೆ ದಿವ್ಯೋತ್ಪಾತಮಗ್ರಮಾದುದು, ಆದರ್ಕೆ ಈ ಪೇಳ್ದ ಮರ್ಯಾದೆಯಲ್ಲಿ ಶಾಂತಿಯಂ ಮಾಡಲ್ ಉಪಶಾಂತಮಪ್ಪುದು.

ಹೊಸಗನ್ನಡದ ಅರ್ಥ -

ಈ ಹಿಂದೆ ಹೇಳಿರುವ ಮೂರು ಬಗೆಯ ಉತ್ಪಾತಗಳು ಶಾಂತವಾಗಲು, ದೇವತಾಶಾಂತಿ ಮಾಡಬೇಕು. ಮೂರನೆಯ ದಿವ್ಯೋತ್ಪಾತ ಶಾಂತಿಗಾಗಿ ಸ್ವರ್ಣದಾನ, ಅನ್ನದಾನ, ಭೂದಾನ, ಗೋದಾನಗಳನ್ನು ಒಮ್ಮನಸ್ಸಿನಿಂದ ಮಾಡಿ, ಈಶಾನ್ಯ ದಿಕ್ಕಿನಲ್ಲಿ ಅಗ್ನಿ ಪ್ರತಿಷ್ಠಾಪನೆ ಮಾಡಿ, ಉಪದ್ರವಶಾಂತಿಗಾಗಿ ಹೋಮವನ್ನು ಮಾಡಬೇಕು. ನಂತರ 'ಅಂಬುಗರೆಯಬೇಕು' ಎಂದರೆ ಶಿವಾಲಯದ ನೆಲದ ಮೇಲೆ ಹಸುವಿನ ಹಾಲನ್ನು ಹಿಂಡಿ ಕರೆಯಬೇಕು. ಈ ಶಾಂತಿ ಕಾರ್ಯದಿಂದ ಮೂರೂ ಬಗೆಯ ಉತ್ಪಾತಗಳೂ ಶಾಂತವಾಗುವುವು. ಈ ಮೂರು ಉತ್ಪಾತಗಳಲ್ಲಿ 'ದಿವ್ಯೋತ್ಪಾತ'ವು ಉಗ್ರವಾದುದು. ಅದಕ್ಕೆ ಈಗ ಹೇಳಿರುವ ಶಾಂತಿಕಾರ್ಯ ಮಾಡುವುದರಿಂದ ಶಾಂತಿಯಾಗುವುದು.

'ಬೃಹತ್ಸಂಹಿತೆ'ಯ ನಲವತ್ತಾರನೆಯ ಅಧ್ಯಾಯದ ಆರನೆಯ ಸೂತ್ರವು ಈ ವಿಷಯವನ್ನೇ ಒಳಗೊಂಡಿದ್ದು, ಅದರ ಮೂಲ, ಅರ್ಥಗಳು ಹೀಗಿವೆ -

ದಿವ್ಯಮಪಿ ಶಮಮುಪೈತಿ ಪ್ರಭೂತ ಕನಕಾನ್ನಗೋಮಹೀದಾನೈಃ।
ರುದ್ರಾಯತನೇ ಭೂಮೌ ಗೋದೋಹಾತ್ ಕೋಟಿಹೋಮಾಚ್ಚ ।।೬।।೪೬।।

ಅರ್ಥ - ಕನಕ, ಗೋವು, ಅನ್ನ ಮತ್ತು ಭೂದಾನಗಳನ್ನು ಸಮೃದ್ಧವಾಗಿ ಮಾಡಿ, ರುದ್ರಾಲಯದ ಭೂಮಿಯಲ್ಲಿ ಹಸುಗಳ ಹಾಲನ್ನು ಕರೆದು, ಕೋಟಿ ಹೋಮ ಅನಗತ್ಯವಾಗಿದೆ.* "ಜೈನರ ಸಂಪ್ರದಾಯದ ಈ ಅಂಬುಗಟಿ'ಯುವ ವ್ರತವು ವೈದಿಕ ಮತದವನಾದ ಈ ಗ್ರಂತಕರ್ತೃವು (ಚಾವುಂಡರಾಯನು) ಹೇಳಿರುವುದು ವಿಚಾರಣೀಯವಾಗಿರುವುದು" ಎಂಬ ವಾದವು ಅನಗತ್ಯವಾಗಿದೆ. ಈ ವಿಚಾರವನ್ನು ಇನ್ನೂ ಮುಂದೆ ಮುಂದುವರೆಸುವ ಅಗತ್ಯವೇ ಇರುವುದಿಲ್ಲ. ಮಾನ್ಯ ಸಂಪಾದಕರು ಮಾಡಿರುವ ಈ ವಿಚಾರವು ಹುರುಳಿಲ್ಲದ ವಾದವಾಗಿರುತ್ತದೆ.

ಈಗ 'ಲೋಕೋಪಕಾರಂ' ಗ್ರಂಥದ ಹೊಸಗನ್ನಡ ಗದ್ಯಾನುವಾದದ ಅಗತ್ಯವು ಈ ಪೀಳಿಗೆಯ ಕನ್ನಡ ಜನತೆಗೆ ಅಗತ್ಯವಾಗಿದೆ. ಹಾಗೆಯೇ ಈ ಗ್ರಂಥದಲ್ಲಿ ತಿಳಿಸಿರುವ ವಿಚಾರಗಳು ಸಂಪೂರ್ಣ ವೈಜ್ಞಾನಿಕವಾಗಿದ್ದು, ವೈಜ್ಞಾನಿಕ ಭಾಷೆಯ ಕನ್ನಡಾನುವಾದವೂ ಇಂದಿನ ವಿಚಾರವಾದಿಗಳ ಕಣ್ಣು ತೆರೆಸಲು ಅಗತ್ಯವಾಗಿದೆ. ಈ ದಿಸೆಯಲ್ಲಿ ಯಾರಾದರೂ ಮುಂದು ಬಂದರೆ, ನನ್ನ ಸಹಾಯ ನೀಡುವುದರಲ್ಲಿ ನನಗಾವ ಸಂಕೋಚವೂಯಿರುವುದಿಲ್ಲ. ■

---

*ಶ್ಲೋಕದ ತಾತ್ಪರ್ಯ :
ಹೇರಳವಾಗಿ ಚಿನ್ನ, ಅನ್ನ, ಗೋವು, ಭೂಮಿಯ ದಾನಗಳಿಂದಲೂ, ಶಿವಾಲಯದಲ್ಲಿ, ಭೂಮಿಯಲ್ಲಿ ಹಸುವಿನ ಹಾಲು ಕರೆಯುವುದರಿಂದಲೂ, ಕೋಟಿ ಹೋಮ ಮಾಡುವುದರಿಂದಲೂ ದಿವ್ಯವೂ ಸಹ ಶಮನವಾಗುತ್ತದೆ.

# ಕಲಬುರ್ಗಿನಾಡಿನ ಕನ್ನಡಭಾಷೆಯ ಸ್ವರೂಪ ಮತ್ತು ಪ್ರಭೇದಗಳು

*- ಡಾ// ವ್ಹಿ. ಜಿ. ಪೂಜಾರ*

ಭಾಷೆಯನ್ನು ಜ್ಯೋತಿಗೆ ಹೋಲಿಸುವುದುಂಟು. ದಂಡಿ ತನ್ನ 'ಕಾವ್ಯಾದರ್ಶ'ದಲ್ಲಿ 'ಭಾಷೆಯೆಂಬ ಜ್ಯೋತಿ ಬೆಳಗದೇ ಹೋಗಿದ್ದರೆ ಮೂರು ಲೋಕಗಳೆಲ್ಲವೂ ಅಂಧಕಾರದಲ್ಲಿ ಮುಳುಗಿರುತ್ತಿದ್ದವು' ಎಂದು ನುಡಿದ ನುಡಿ ದಿಟವಾದುದಾಗಿದೆ. ಹಾಗೆ ನೋಡಿದರೆ ಎಲ್ಲ ಜ್ಞಾನ ಕ್ಷೇತ್ರಗಳ ಬುಡದಲ್ಲಿ ಮಿನುಗುವ ಬೆಳಕೇ ಭಾಷೆಯಾಗಿದೆ. ಭಾಷೆ ಇರದೇ ಇರುವ ಸಂದರ್ಭವನ್ನು ಊಹಿಸಲಿಕ್ಕೂ ಭಯಾನಕವೆನಿಸುತ್ತದೆ. ನಮ್ಮ ದೈನಂದಿನ ಬೇಕು-ಬೇಡಗಳನ್ನು, ಭಾಷೆಯಿಂದಲೇ ಪೂರೈಸಿಕೊಳ್ಳುವೆವು. ನಮ್ಮ ಅಂತರಂಗದಲ್ಲಿನ ಭಾವನೆಗಳನ್ನು ಇನ್ನೊಬ್ಬರಿಗೆ ತಲುಪಿಸುವ ಸಾಧನೆಯೇ ಭಾಷೆ. ಭಾಷೆಯ ಪರಮಧ್ಯೇಯ ಪರಸ್ಪರದಲ್ಲಿ ಸಂಪರ್ಕವನ್ನು ಏರ್ಪಡಿಸುವುದೇ ಆಗಿದೆ. ಪ್ರಮುಖ ಸಂಪರ್ಕ ಮಾಧ್ಯಮವಾದ ಭಾಷೆ ಕೇವಲ ಮಾತಾಡಿದ್ದು, ಬರೆದದ್ದು ಅಷ್ಟೇ ಅಲ್ಲ, ಮಾತಿಗೂ ಬರಹಕ್ಕೂ ಮೀರಿದ ಆಂಗಿಕವಾದ ಹಾವ-ಭಾವ, ಚಲನ-ವಲನಗಳೂ ಭಾಷೆಯ ಕಕ್ಷೆಯಲ್ಲಿಯೇ ಬರುವುವು. ಭಾಷೆ ಮನುಷ್ಯನಿಗಷ್ಟೇ ಸೀಮಿತವಾದುದಲ್ಲ. ಪಶು, ಪಕ್ಷಿ ಮುಂತಾದ ಜೀವ ಜಂತುಗಳೆಲ್ಲವೂ ತಮ್ಮದೇ ವಿಧವಾದ ಸನ್ನೆ ಸಂಕೇತಗಳ ಮೂಲಕ ಪರಸ್ಪರ ಸಂಪರ್ಕವನ್ನು ಏರ್ಪಡಿಸಿಕೊಳ್ಳುವುವು. ಭಾಷೆಯ ವ್ಯಾಪ್ತಿ ತುಂಬ ವಿಶಾಲವಾದುದಾಗಿದೆ. ದೃಶ್ಯ, ಶ್ರವ್ಯ ಹಾಗೂ ಧ್ವನಿ ಸಂಕೇತಗಳ ಮಾಧ್ಯಮಗಳಲ್ಲಿ ಅದು ವ್ಯವಹರಿಸುವುದು. ಪ್ರಾಣಿಭಾಷೆ ತತ್ಕಾಲೀನವಾದುದು ಹಾಗೂ ತುಂಬ ಪರಿಮಿತಿಗೆ ಒಳಪಟ್ಟಂತಹದು. ಆದರೆ ಮಾನವ ಭಾಷೆಗೆ ತುಂಬ ವಿಶಾಲವಾದ ವ್ಯಾಪ್ತಿ ಇದೆ. ಸೂಕ್ಷ್ಮಾತಿ-ಸೂಕ್ಷ್ಮ ಭಾವನೆಗಳನ್ನು ಮಾನವ ಇನ್ನೊಬ್ಬರಿಗೆ ಮಾತಿನ ಮೂಲಕ ಬರಹದ ಮೂಲಕ ತಲುಪಿಸಬಹುದು. ಸಾವಿರಾರು ವರ್ಷಗಳ ನಂತರವೂ ಬರಹದ ಮೂಲಕ ಮನುಷ್ಯನ ಭಾವನೆಗಳನ್ನು ಅರ್ಥ ಮಾಡಿಕೊಳ್ಳಬಹುದು. ಈ ಸೌಲಭ್ಯ ಪ್ರಾಣಿಭಾಷೆಗೆ ಇಲ್ಲ. ಮಾನವನ ಜನಾಂಗ ತಮತಮಗೆ ಅನುಕೂಲವಾಗುವಂತೆ ತಂತಮ್ಮ ಪ್ರದೇಶಗಳಲ್ಲಿ ಲಿಪಿಸಂಕೇತಗಳನ್ನು ಮಾಡಿಕೊಂಡು ಪರಸ್ಪರ ಭಾಷಾಮಾಧ್ಯಮದ ಮೂಲಕ ತಮ್ಮ ಭಾವನೆಗಳನ್ನು ವಿನಿಮಯ ಮಾಡಿಕೊಳ್ಳುವುದುಂಟು.ಆದುದರಿಂದಲೇ ಜಗತ್ತಿನಲ್ಲಿ ವಿಧವಿಧದ ಲಿಪಿಗಳನ್ನು ಹೊಂದಿದ ಭಾಷೆಗಳುಂಟು. ಇಂಥ ಭಾಷೆಗಳ ಉಗಮಕ್ಕೆ ಮಾಸವನೇ ಕಾರಣ. ಆತನಿಂದಲೇ ಭಾಷೆ ಉಗಮಹೊಂದಿ ಮನುಷ್ಯಮನುಷ್ಯರ ಸಮೂಹದಲ್ಲಿ ಅದು ಬೆಳೆಯುವುದುಂಟು. ಹಾಗೆ ಬೆಳೆದುಬಂದ ಅನೇಕ ಭಾಷೆಗಳಾಗಿ ಪ್ರಚಲಿತದಲ್ಲಿರುವುದನ್ನು ನಾವಿಂದು ಕಾಣುವೆವು.

ಭೂಮಿಗೆ ಹೇಗೆ ಭೂಗೋಲವನ್ನು ಅನುಸರಿಸಿ ನಾವು ವ್ಯವಹರಿಸುವೆವೋ ಹಾಗೆ ಭಾಷೆಗೂ ಭೂಗೋಲ ಉಂಟು. ಆಯಾ ಪ್ರದೇಶಕ್ಕೆ ಅನುಗುಣವಾದ ರೀತಿಯಲ್ಲಿ ಅಲ್ಲಲ್ಲಿ ಭಾಷೆ ಪ್ರಯೋಗಗೊಳ್ಳುತ್ತಿರುವುದನ್ನು ನಾವು ಕಾಣುವೆವು. ಭಾಷೆ ನಿಂತ ನೀರಲ್ಲ. ಅದು ನಿರಂತರ ಪ್ರವಹಿಸುತ್ತಿರುವ ಪ್ರವಾಹ. ಅದು ಕಾಲಗತಿಯಲ್ಲಿ ಪರಿವರ್ತನೆಯನ್ನು ಹೊಂದುತ್ತಲೇ ಬರುವುದು. ಈ ರೀತಿಯ ಬದಲಾವಣೆ ಅದರ ಜೀವಂತಿಕೆಯ ಲಕ್ಷಣವೂ ಹೌದು. ಕನ್ನಡ ಭಾಷೆಯನ್ನೇ ಉದಾಹರಣೆಯಾಗಿ ತೆಗೆದುಕೊಂಡರೆ ಹಳಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡ ಈ

ಅವಸ್ಥೆಗಳಲ್ಲಿ ಭಾಷೆ ಬದಲಾವಣೆ ಹೊಂದುತ್ತಾ ತನ್ನ ಸ್ವರೂಪವನ್ನು ವಿಭಿನ್ನವಾಗಿ ರೂಪಿಸಿಕೊಳ್ಳುತ್ತ ಬಂದುದನ್ನು ಕಾಣುವೆವು. ಭಾಷೆ ಹೀಗೆ ಕಾಲಗತಿಯಲ್ಲಿ ಬದಲಾವಣೆ ಹೊಂದಿ ಬೆಳೆಯುತ್ತಾ ಬರುವುದರ ಜೊತೆಗೆ ಅದು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಸ್ವರೂಪವನ್ನು ಹೊಂದಿ ಬಳಕೆಗೊಳ್ಳುತ್ತಿರುವುದನ್ನು ಕಾಣುವೆವು.

ಕನ್ನಡ ಭಾಷೆಯನ್ನು ಕರ್ನಾಟಕದ ಎಲ್ಲ ಜಿಲ್ಲೆಯ ಜನ ಮಾತಾಡುತ್ತಿದ್ದರೂ ಅವರೆಲ್ಲರೂ ಒಂದೇ ವಿಧದಲ್ಲಿ ಮಾತಾಡದೆ ಇರುವುದನ್ನು ಕಾಣುವೆವು. ಪ್ರದೇಶದಿಂದ ಪ್ರದೇಶಕ್ಕೆ ಭಾಷೆ ಆಡುನುಡಿಯಲ್ಲಿ ಭಿನ್ನವಾಗಿರುವುದನ್ನು ಕಾಣುವೆವು. ಬರಹ ರೂಪದಲ್ಲಿ ಅಂಥ ಭಿನ್ನತೆಗಳೇನೂ ಕಾಣಿಸದಿದ್ದರೂ ಮಾತಿನ ರೂಪದಲ್ಲಿ ಅದು ಅನೇಕ ಬಗೆಯಾಗಿರುವುದನ್ನು ಕಾಣುವೆವು. ಕಾರವಾರದವ 'ಹೋಗುವಾ' ಎಂದರೆ ಬಿಜಾಪುರದವ 'ಹೋಗೂನು' ಎನ್ನುತ್ತಾನೆ. ಅದೇ ಕಲಬುರ್ಗಿಯವ 'ಹೋಗಾಮು' ಎಂದರೆ ಬೀದರದವ 'ಹೋಗಾರಿ' ಎನ್ನುತ್ತಾನೆ. ಇದರಂತೆಯೇ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿನ ಆಡುರೂಪದಲ್ಲಿರುವ ಭಾಷೆಯನ್ನು ಅಧ್ಯಯನಕ್ಕೆ ಎತ್ತಿಕೊಂಡಾಗ ಅದು ಭಿನ್ನ ರೂಪದಲ್ಲಿ ಬಳಕೆಯಾಗುತ್ತಿರುವುದು ವೇದ್ಯವಾಗುವುದು.

ಕನ್ನಡ ಭಾಷೆ ಮಂಗಳೂರು ಕನ್ನಡ, ಮೈಸೂರು ಕನ್ನಡ, ಧಾರವಾಡ ಕನ್ನಡ ಹಾಗೂ ಕಲಬುರ್ಗಿ ಕನ್ನಡ ಎಂಬ ನಾಲ್ಕು ಉಪಭಾಷೆಗಳನ್ನು ಹೊಂದಿದೆ. ಈ ಉಪ-ಭಾಷೆಗಳ ಒಳಹೊಕ್ಕು ನೋಡಿದಾಗ ಅನೇಕ ಪ್ರಭೇದದ ಭಾಷೆಗಳನ್ನು ಗುರುತಿಸಬಹುದು. ಈ ಪ್ರಭೇದದ ಭಾಷೆಗಳನ್ನು ಪರಿಶೀಲಿಸಿದಾಗ ವ್ಯಕ್ತಿಭಾಷೆಯ ಪರಿಚಯವಾಗುವುದು. ಹಾಗೆ ನೋಡಿದರೆ ಭಾಷೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುವುದುಂಟು. ಒಬ್ಬ ವ್ಯಕ್ತಿ ಹಲವಾರು ವ್ಯಕ್ತಿಗಳೊಡನೆ ಹಲವಾರು ಸಂದರ್ಭಗಳಲ್ಲಿ ಹಲವಾರು ಕೆಲಸ ಕಾರ್ಯಗಳಿಗೆ ಹಲವಾರು ರೀತಿಯಲ್ಲಿ ಮಾತಾಡುವುದುಂಟು. ಈ ಎಲ್ಲ ಮಾತುಗಳ ಮೊತ್ತವೇ ವ್ಯಕ್ತಿಭಾಷೆ. ಇಂಥ ಹಲವು ವ್ಯಕ್ತಿಗಳ ಗುಂಪೇ ಪ್ರಭೇದಭಾಷೆ. ಪ್ರಭೇದಭಾಷೆಯಲ್ಲಿ ವ್ಯಕ್ತಿ-ವ್ಯಕ್ತಿಗಳ ನಡುವೆ ನಡೆದ ಮಾತುಗಳು ಪರಸ್ಪರರಿಗೆ ಅರ್ಥವಾಗುವಂತಿರುತ್ತದೆ. ಅದೇ ಪ್ರಭೇದಭಾಷೆಯ ಗಡಿಯನ್ನು ದಾಟಿ ಉಪ-ಭಾಷಾ ವಲಯದಲ್ಲಿ ಪ್ರವೇಶ ಮಾಡಿದ್ದೇವೆಂದು ತಿಳಿಯಬೇಕು. ಈ ಹಿನ್ನೆಲೆ, ಈ ರೀತಿಯ ಜ್ಞಾನವಿದ್ದವರು ನಮ್ಮ ರಾಜ್ಯದ ಪ್ರತಿ ಜಿಲ್ಲೆಯಲ್ಲಿ ಪ್ರಯೋಗಗೊಳ್ಳುತ್ತಿರುವ ಕನ್ನಡ ಭಾಷೆ ಹೇಗೆ ಭಿನ್ನಸ್ವರೂಪದ್ದಾಗಿರುತ್ತದೆ ಎಂಬುದನ್ನು ತಿಳಿಯುವರು. ಹೀಗೆ ತಿಳಿದು ಕಲಬುರ್ಗಿ ನಾಡಿನ ಕನ್ನಡ ಭಾಷೆಯ ಮೇಲೆ ಉರ್ದು ಹಾಗೂ ಮರಾಠಿ ಭಾಷೆಯ ಪ್ರಭಾವ ಹೆಚ್ಚಾಗಿದೆ. ಸುಮಾರು ಆರುನೂರು ವರ್ಷ ಹೈದ್ರಾಬಾದ್ ನಿಜಾಮನ ಆಡಳಿತಕ್ಕೆ ಈ ಪ್ರದೇಶ ಒಳಪಟ್ಟಿತ್ತು. ಆಗ ಉರ್ದು ಭಾಷೆಯೇ ಇಲ್ಲಿನ ಆಡಳಿತ ಭಾಷೆಯಾಗಿತ್ತು. ಕನ್ನಡ ಕೇವಲ ಮನೆಯಲ್ಲಿ ಅಲ್ಲಲ್ಲಿ ಬಾಯ್ಮಾತಿನ ಭಾಷೆಯಾಗಿ ಜೀವ ಹಿಡಿದುಕೊಂಡಿತ್ತು. ಕಲಬುರ್ಗಿ ಜಿಲ್ಲೆಯ ಪೂರ್ವಕ್ಕೆ ಆಂಧ್ರಪ್ರದೇಶ, ಉತ್ತರ ಭಾಗಕ್ಕೆ ಬೀದರ ಜಿಲ್ಲೆ, ಪಶ್ಚಿಮಕ್ಕೆ ಮಹಾರಾಷ್ಟ್ರ ಗಡಿ ಪ್ರದೇಶವಿದೆ. ಮಹಾರಾಷ್ಟ್ರ ಗಡಿ ಪ್ರದೇಶದಲ್ಲಿ ಮರಾಠಿ ಕನ್ನಡ ದ್ವಿಭಾಷಿಕತೆ ಇರುವುದನ್ನು ಕಾಣುವೆವು. ತೆಲುಗು ಪ್ರಭಾವ ಇಲ್ಲಿ ಅಷ್ಟಾಗಿ ಆಗಿಲ್ಲ. ಆದರೆ ಉರ್ದುವಿನ ಪ್ರಭಾವ ಸಾಕಷ್ಟು ಆಗಿದ್ದು, ಇಲ್ಲಿನ ಭಾಷೆಯನ್ನು 'ಮೊಗಲಾಯಿ ಕನ್ನಡ'ವೆಂದೇ ಕರೆಯುವಂತಾಗಿದೆ.

ಕಲಬುರ್ಗಿ ಜಿಲ್ಲೆಗೆ ಪ್ರಾಚೀನ ಕಾಲದಿಂದಲೂ ಉಜ್ವಲವಾದ ಇತಿಹಾಸವಿದೆ. ರಾಷ್ಟ್ರಕೂಟ ನೃಪತುಂಗನ ರಾಜಧಾನಿ ಇದ್ದದ್ದು ಈ ಜಿಲ್ಲೆಯ ಮಳಖೇಡದಲ್ಲಿ. ಈ ಜಿಲ್ಲೆಯಲ್ಲಿರುವ

ಸನ್ನತಿ ಪ್ರಾಚೀನ ಬೌದ್ಧ ಕೇಂದ್ರವಾಗಿತ್ತು. ಈ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನಲ್ಲಿರುವ ಚಾಲುಕ್ಯರ ವಿದ್ಯಾಕೇಂದ್ರ ನಾಗಾವಿ ತುಂಬ ಪ್ರಸಿದ್ಧವಾದ ಘಟಿಕಸ್ಥಾನವಾಗಿತ್ತು. 'ಕವಿರಾಜಮಾರ್ಗ' ಕನ್ನಡದ ಆದಿಗ್ರಂಥ ಹುಟ್ಟಿಕೊಂಡಿದ್ದು ಇಲ್ಲಿಯೇ ಎಂದ ಮೇಲೆ ಈ ನಾಡಿನಲ್ಲಿ ಪ್ರಾಚೀನ ಕಾಲದಲ್ಲಿ ಕನ್ನಡ ಭಾಷೆ ತುಂಬ ವೈಭವದಿಂದ ವಿರಾಜಮಾನವಾಗಿತ್ತೆಂಬುದು ವಿದಿತವಾಗುವುದು. ೧೨ನೇ ಶತಮಾನದಲ್ಲಿ ಬಸವಾದಿ ಶರಣರು ಈ ನೆಲದಲ್ಲಿಯೇ ಉದಿಸಿ ಅದ್ಭುತ ಕ್ರಾಂತಿಗೆ ಕಾರಣರಾದರು. ಕನ್ನಡ ಭಾಷೆಯ ನೈಜ ಸ್ವರೂಪವನ್ನು ಸರಳತೆಯನ್ನು ಅವರ ವಚನಗಳಿಂದ ತಿಳಿಯುವೆವು. ಈ ನಾಡಿನ ಕನ್ನಡ ಭಾಷೆಗಳಲ್ಲಿಯೇ ವಚನಗಳನ್ನು ರಚಿಸಿದ ಶಿವಶರಣರು ಕನ್ನಡ ಸಾರಸ್ವತ ಪ್ರಪಂಚಕ್ಕೆ ಹೊಸ ದಿಗಂತವನ್ನು ತೆರೆದು ತೋರಿದರೆಂದು ಈ ಭಾಗದವರೇ ಆದ ಪ್ರೊ. ಡಿ.ಕೆ. ಭೀಮಸೇನರಾಯರು ತುಂಬ ಹೆಮ್ಮೆಯಿಂದ ಒಂದೆಡೆ ಹೀಗೆ ಹೇಳಿದ್ದುಂಟು: "ಹನ್ನೆರಡನೆಯ ಶತಮಾನದ ಮಧ್ಯಭಾಗ, ಬಸವೇಶ್ವರರ ಅಭ್ಯುದಯದ ಕಾಲ. ಕನ್ನಡ ಭಾಷೆಯ ನವೋದಯದ ಕಾಲ, ಭಾಷೆಯು ಕೃತ್ರಿಮತೆ ಹೋಗಿ ಸಹಜತೆ ಆವಿರ್ಭವಿಸಿದ ಕಾಲ. ಕಲ್ಯಾಣ ಭೂಕೈಲಾಸವೆನಿಸಿತು. ಶಿವಶರಣರ ಕನ್ನಡದ ವಾಣಿ ಅಮರವಾಣಿಯಾಯಿತು. ಬಸವಣ್ಣನವರ ಮುಖಕಮಲದಿಂದ ಹೊರಟ ಈ ದಿವ್ಯವಾಣಿ ಅಮೃತತುಲ್ಯವಾಯಿತು. ಕನ್ನಡಕ್ಕೆ ನವಚೈತನ್ಯವನ್ನು ಎರೆಯಿತು. ಅದು ಆಗಿನ ಇಲ್ಲಿನ ಜನವಾಣಿ. ಎಂಥ ಆಕರ್ಷಕ ಶಕ್ತಿ ಆ ವಾಣಿಯದು! ಹರಿಹರ ರಾಘವಾಂಕರಂತಹ ಉದ್ದಾಮ ಕವಿಗಳನ್ನು ತನ್ನತ್ತ ಎಳೆಯಿತು. ಅಲ್ಲಮ, ಚೆನ್ನಬಸವ, ಸಿದ್ಧರಾಮರಂಥ ಜ್ಞಾನಿಗಳನ್ನು ತನ್ನತ್ತ ಸೆಳೆಯಿತು. ಅಸಂಖ್ಯಾತ ಶಿವಶರಣರ ಮುಖಮಂಟಪದಲ್ಲಿ, ಶೂನ್ಯ ಸಿಂಹಾಸನದಲ್ಲಿ ನರ್ತಿಸತೊಡಗಿದಳು ಕನ್ನಡ ಸರಸ್ವತಿ. ಬಸವಕಲ್ಯಾಣ ರಂಗಸ್ಥಳ, ಬಸವಣ್ಣನವರ ಮಹಾತ್ಮೆ ಎಂಥದ್ದು? ಕನ್ನಡ ಬಾರದವರಿಗೂ ಅವರ ಸ್ಮರಣೆಮಾತ್ರದಿಂದ ಕನ್ನಡ ಜ್ಞಾನೋದಯವಾಗಿ ಕನ್ನಡದಲ್ಲಿ ನುಡಿಸಿತು. ಅದು ಆಗಿನ ಇಲ್ಲಿಯ ಕನ್ನಡ ಸ್ವರೂಪ" (ಸುವರ್ಣ ಸಂಚಯ. ಪುಟ ೨೬೬-೨೬೭.) ಮುಂದೆ ಕನ್ನಡ ಭಾಷೆಯ ಸ್ವರೂಪ ಇಲ್ಲಿ ಪರಭಾಷೆಯ ಕಪಿಮುಷ್ಠಿಯಲ್ಲಿ ಸಿಲುಕಿ ಬದಲಾವಣೆಗೊಳ್ಳುತ್ತಾ ಬಂದಿತು. ಬಹಮನಿ ಅರಸರು ೧೪ನೇ ಶತಮಾನದಲ್ಲಿ ಕಲಬುರ್ಗಿಯನ್ನು ತಮ್ಮ ಕೇಂದ್ರ ಮಾಡಿಕೊಂಡನಂತರ ಕನ್ನಡ ಭಾಷೆ ಇಳಿಮುಖ ಪ್ರಾರಂಭಗೊಂಡಿತ್ತಲ್ಲದೆ ಮುಂದೆ ೬೦೦ ವರ್ಷಗಳ ಕಾಲ ಉರ್ದು ಭಾಷೆಯ ಆಳರಸರ ಆಡಳಿತದಲ್ಲಿ ಇಲ್ಲಿನ ಕನ್ನಡ ಭಾಷೆ ಉರ್ದು ಭಾಷೆಯ ಹಿಡಿತದಲ್ಲಿತ್ತು. ಕಲಬುರ್ಗಿ ನಾಡಿನ ಕನ್ನಡ ಭಾಷೆಯ ಮೇಲೆ ಉರ್ದುವಿನ ಪ್ರಭಾವ ತುಂಬ ಆಗಿದೆ. ಪರೇಶಾನ್, ತನಿಖಾ, ಜಲಸಾ, ಕಿಲಾ, ಸವಾರಿ, ತೇಜ್, ಗರಂ, ಕಿರಾಯ್, ಬಲಾಯಿ, ಖರಾಬ್, ಮನಿಯಾದ, ಷಿಕಾಯತ್, ಗುಂಜಾಯಿಸ್, ಖಾರಿಸ್, ಬಯಾನ, ಹಿಕಮತ್, ಮುಷ್ಕಿಲ್, ಮಜಬೂರ್, ದೋಬಿ, ಗರೀಬ್, ಉಸುಲ್, ತಕಲಿಫ್, ಕೀಮತ್, ಹತ್ಯಾರ್, ಬದನಾಮ್, ದರೋಜಿ, ಜುಲ್ಮಾನ್ ಮುಂತಾದ ಉರ್ದು ಶಬ್ದಗಳು ಇಲ್ಲಿನ ದೈನಂದಿನ ಆಡುಭಾಷೆಯಲ್ಲಿ ಕೂಡಿಕೊಂಡು ಇಲ್ಲಿನ ಭಾಷೆ ವಿಶೇಷರೂಪ ಪಡೆದುದನ್ನ ಗುರುತಿಸುವೆವು. ಇದಕ್ಕೆ ಮೊಗಲಾಯಿ ಕನ್ನಡವೆಂದೂ ಕಲಬುರ್ಗಿ ನಾಡನ್ನು ಮೊಗಲಾಯಿ ಎಂದೂ ಕರೆಯುವುದುಂಟು. ನಿಜಾಂನ ಆಳ್ವಿಕೆಯಿದ್ದಾಗ ಇಲ್ಲಿ ಪ್ರಜೆಗಳು ಅರ್ಜಿ ಬರೆಯುವಾಗ 'ದರಬಂದಗಿ ಹಜರತ ಖುದಾಯ ವಂದೇ' ಎಂದು ಪ್ರಾರಂಭದಲ್ಲಿ ಬರೀತಾ ಇದ್ದರು. ಈ ಪ್ರದೇಶದ ಆಡುನುಡಿ ಮೊಗಲಾಯಿ ಕನ್ನಡವಾದರೆ ಬರೆಯಲು ಉಪಯೋಗಿಸುವ ಲಿಪಿ 'ಮೋಡಿ.' ಮರಾಠಿ ಭಾಷೆಗೆ ಹತ್ತಿರದ ಲಿಪಿಯೇ ಮೋಡಿ

ಲಿಪಿ, ಮೇಲಧಿಕಾರಿಗಳು ಉರ್ದು ಭಾಷಿಕರಾಗಿದ್ದರೂ ಗ್ರಾಮ, ತಾಲ್ಲೂಕು ಮಟ್ಟದ ಆಧೀನ ಅಧಿಕಾರಿಗಳು ಲೆಕ್ಕಪತ್ರ ಇಡುವವರು ಮೋಡಿ ಲಿಪಿಯಲ್ಲೇ ಬರೆಯುತ್ತಾ ಇದ್ದರು. ಉರ್ದು, ಮೋಡಿ ಹಾಗೂ ತೆಲುಗು ಈ ಭಾಷೆಗಳ ಹಿಡಿತದಲ್ಲಿ ಕನ್ನಡಭಾಷೆ ನಲುಗಿಹೋಯಿತು. ಮರಾಠಿ ಶಬ್ದಗಳು ಈ ಭಾಗದ ಭಾಷೆಯಲ್ಲಿ ಸೇರಿ ಹೋಗಿವೆ. ಮರಾಠಿ ಭಾಷೆಯ ಪ್ರಭಾವ ಕಲಬುರ್ಗಿ ನಾಡಿನಾದ್ಯಂತ ಆಗಿಲ್ಲ. ಕೇವಲ ಅಫಜಲಪುರ, ಕಲಬುರ್ಗಿ, ಆಳಂದ ತಾಲ್ಲೂಕುಗಳಲ್ಲಿ ಆಗಿದೆ. ಮಾಂವಸಿ, ಪಾವಣ್ಣ, ಅಬಜ, ವೈನಿ, ಆಗಾವ್, ದಗದ, ದಡದಡೀತ್, ವಹಿ, ಪಾರ-ಪೋರಿ, ವರಾತ್, ಆಟಾಪ, ಠೀಕ, ರಗಡ, ಝುಣಕ, ಹಳು, ಠಿಕಾಣ, ಖರೆ, ಖಿಚಡಿ, ಸಂದಕ, ಫಂಸಿ, ಫಾವಡಿ, ದಾಮ, ಪರಾತ್, ಮುಂತಾದ ಮರಾಠಿ ಶಬ್ದಗಳು, ಕಲಬುರ್ಗಿ ಕನ್ನಡ ಭಾಷೆಯಲ್ಲಿ ಬೆರೆತುಹೋಗಿವೆ. ಈ ಭಾಗದ ಭಾಷೆ ಮರಾಠಿಮಯವಾಗುವುದಕ್ಕಿಂತ ಉರ್ದುಮಯವಾದುದೇ ಹೆಚ್ಚು. ಏಕೆಂದರೆ ಈ ನಾಡಿನ ಪಟ್ಟಣ ಪ್ರದೇಶಗಳಲ್ಲಿ ಮುಸಲ್ಮಾನ ಜನಸಂಖ್ಯೆ ಹೆಚ್ಚಾಗಿದೆ. ಕಲಬುರ್ಗಿ ಪಟ್ಟಣವೊಂದರಲ್ಲೇ ಶೇ ೩೫ ಉರ್ದು ಭಾಷೆಯನ್ನಾಡುವ ಮುಸ್ಲಿಂರಿದ್ದಾರೆ ಮತ್ತು ಈ ನಾಡು ಸುಮಾರು ೬೦೦ ವರ್ಷಗಳ ಕಾಲ ಮುಸ್ಲಿಂ ಆಳರಸರ ಆಡಳಿತಕ್ಕೆ ಒಳಪಟ್ಟಿದ್ದರಿಂದ ಅವರ ಆಡುಭಾಷೆ ಧರ್ಮಭಾಷೆಯಾದ ಉರ್ದು ಇಲ್ಲಿನ ಆಡಳಿತ ಭಾಷೆಯಾದುದು ಸಹಜವೇ ಆಗಿದೆ. ಅಂತಹ ಪರಿಸ್ಥಿತಿಯಲ್ಲಿ ಕನ್ನಡ ಭಾಷೆ ಉಳಿದುಕೊಂಡು ಬಂದುದೇ ಹೆಚ್ಚಿನದಾಗಿದೆ. ಕಲಬುರ್ಗಿ ನಾಡಿನ ಜನತೆಯ ಜೀವನಕ್ರಮ, ಭಾಷಾ ಒಲವುಗಳ ಭಾಷಿಕ ಹಾಗೂ ಭಾಷಿಕವಲ್ಲದ ಹಲವಾರು ಅಂಶಗಳು ಇಲ್ಲಿನ ಮುಸ್ಲಿಂ-ಕನ್ನಡ ಪ್ರಭೇದದಲ್ಲಿ ವಿಶೇಷವಾಗಿ ಕಾಣಬರುತ್ತದೆ. ಕಲಬುರ್ಗಿ ನಾಡಿನ ಕನ್ನಡ ಭಾಷೆ ಕರ್ನಾಟಕದ ಇನ್ನುಳಿದ ಜಿಲ್ಲೆಗಳ ಭಾಷೆಗಿಂತ ಭಿನ್ನವೂ, ವೈಶಿಷ್ಟ್ಯಪೂರ್ಣವೂ ಆಗಿದೆಯೆಂಬುದನ್ನು ಈ ಕೆಳಗಿನ ಅಂಶಗಳಿಂದ ಅರಿಯಬಹುದಾಗಿದೆ.

ಹಾನ, ಹಾರ, ಹಾಳ, ಹನಾ, ಹರಾ, ಹಳಾ, ಹೀನಿ, (ಇದ್ದೀನಿ), ಹೀರಿ (ಇದ್ದೀರಿ) ಎಂಬ ಪೂರ್ಣ ಕ್ರಿಯಾರೂಪಗಳು ಇಲ್ಲಿ ವಿಶೇಷವೆಂಬಂತೆ ಬಳಕೆಗೊಳ್ಳುತ್ತವೆ.

'ಅಪ್ಪರ್, ಅಪ್ಪಳ್, ಅಪ್ಪನ್ - ಎಂಬ ಪ್ರಾಚೀನ ಕನ್ನಡ ರೂಪಗಳು ವರ್ಣಪಲ್ಲಟ ಕ್ರಿಯೆಯಿಂದ ಹರ, ಹರಾ, ಹಾರ, ಹಳ, ಹಳಾ, ಹಾಳಾ, ಹನ, ಹಾನ, ಹನಾ ಎಂಬ ರೂಪಗಳನ್ನು ಪಡೆದಿವೆ.

ಅಪ್ಪರ್ > ಅಹರ್ > ಹ ಅರ್ > ಹರ > ಹರಾ > ಹಾರ, (ಇದ್ದಾರೆ) (ಪ > ಹ)
ಅಪ್ಪಳ್ > ಅಹಳ್ > ಹ ಅಳ್ > ಹಳ್ > ಹಳಾ > ಹಾಳಾ (ಇದ್ದಾಳೆ)
ಅಪ್ಪನ್ > ಅಹನ್ > ಹ ಅನ್ > ಹನ > ಹನಾ > ಹಾನ (ಇದ್ದಾನೆ)
ಅಪ್ಪುದು > ಅಹುದು > ಹ ವುದು > ಹೌದು > ಹೌಂದ > ಹೊಯಿಂದ, ಹೊಂದು ಇತ್ಯಾದಿ.

ಕರ್ನಾಟಕದ ಬೇರೆ ಜಿಲ್ಲೆಯ ವ್ಯಕ್ತಿ ಕಲಬುರ್ಗಿಗೆ ಬಂದು ಇಂಥವರು ಮನೆಯಲ್ಲಿ ಇದ್ದಾರೆಯೇ ಎಂದು ಕೇಳಿದಾಗ ಅವರು ಹಾರಬರ್ರೀ ಎನ್ನುತ್ತಾರೆ. ಬಂದ ವ್ಯಕ್ತಿ ಗಾಬರಿಯಾಗಿ ಅವರ ಮುಖ ನೋಡುತ್ತಲೇ ಅಲ್ಲೇ ನಿಲ್ಲುತ್ತಾನೆ. ಆಗ ಆತನನ್ನು ಕಂಡ ಮೇಲೆ 'ಮೇಲೆ ಹಾರಬರ್ರೀ' ಎಂದು ಮತ್ತೊಮ್ಮೆ ಹೇಳಿದಾಗ ಆತ ಇನ್ನೂ ದಿಗಿಲು ಬೀಳುತ್ತಾನೆ. ಇದರಂತೆಯೇ ಬೇರೆಡೆಯಿಂದ ಬಂದ ವ್ಯಕ್ತಿಗೆ ಇಲ್ಲಿನವರು ಸ್ನಾನ ಮಾಡ್ತೀರಾ ಎಂದು ಕೇಳುವುದಕ್ಕೆ ಬದಲಾಗಿ ಒಳಗ ಹುಯ್ಯಕೋತೀರಾ? ಏನ ಹೊರಗ ಹುಯ್ಯಕೋತೀರಾ ಎಂದಾಗ ಆ ವ್ಯಕ್ತಿ

ಆಶ್ಚರ್ಯಚಕಿತನಾಗುವನು. ಆತ ಬೊಬ್ಬೆ ಇಡುವ ಸಂಪ್ರದಾಯ ಇಲ್ಲಿದೆಯೇನೋ ಎಂದುಕೊಂಡು ಹೊರಗೇ ಹುಯ್ಯಕೋತ್ತೇನೆ ಎಂದಾಗ ಆತನನ್ನು ಊರಿನ ಹೊರಗಿನ ಭಾವಿಯೊಂದಕ್ಕೆ ಕರೆದೊಯ್ದು ತಣ್ಣೀರಿನ ಸ್ನಾನ ಮಾಡಿಸುವರು. ಇದರಂತೆಯೇ ಬೇರೆಡೆಯಿಂದ ಬಂದ ವ್ಯಕ್ತಿಗೆ ಇಲ್ಲಿನವರು 'ಕಿಲ್ಲಿ ಕೊಡ್ರಿ' ಎಂದಾಗ ಆತ ನನ್ನಲೇನು ಕೀಲಿ ಕೈ ಇಲ್ಲಲ್ಲ ಎನ್ನುವನು. ಕೀಲಿ ಕೈ ಇಲ್ಲ 'ಕಿಲ್ಲಿ' ಅಂದರೆ 'ಇಲ್ಲಿ' ಎಂದರ್ಥ. ಹೀಗೆ ಇಲ್ಲಿನ ಭಾಷೆಯ ಪರಿಚಯವಿಲ್ಲದ ವ್ಯಕ್ತಿಗಳು ಒಮ್ಮೆಲೆ ದಂಗಾಗುತ್ತಾರೆ. ಬಸ್ಸು ಬರುವುದಕ್ಕೂ ಹೋಗುವುದಕ್ಕೂ ಇಲ್ಲಿ 'ಬಸ್ಸು ಹೊಂಟದ' ಎಂದೇ ಅನ್ನುವರು.

ಅಲ್ಲಿ, ಇಲ್ಲಿ, ಎಲ್ಲಿ, ಅವನು, ಇವನು, ಇದು, ಅದು, ಆಕಡೆ, ಈಕಡೆ ಈ ರೂಪಗಳಿಗೆ ಬದಲಾಗಿ ಇಲ್ಲಿ ಕಲ್ಲಿ, ಕಿಲ್ಲಿ, ಕೆಲ್ಲಿ, ಕವ, ಕಿವ, ಕಿದು, ಕದು, ಕಕಡೆ ಎಂದು ವ್ಯಾಪಕವಾಗಿ ಬಳಕೆಗೊಳ್ಳುತ್ತವೆ.

ಪ್ರಮಾಣವಾಚಕ ಪದಗಳ ಬಳಕೆಯಲ್ಲೂ ವಿಶೇಷತೆಯನ್ನು ಕಾಣುವೆವು

ಅಷ್ಟು > ಕಷ್ಟು ಕಟು

ಇಷ್ಟು > ಕಿಷ್ಟು ಕೀಟು

ಕೇಸಿ, ಕೇರಿ, ಅಪ್ಲೆ, ಉಪ್ಲೆ, ಅಟ್ಗೆ ಈ ವಿಶಿಷ್ಟ ರೂಪದ ಪ್ರತ್ಯಯಗಳು ವಿಶೇಷವಾಗಿ ಬಳಕೆಗೊಳ್ಳುತ್ತಿರುವುದನ್ನು ಕಾಣುವೆವು. ಬಂದಕೇಸಿ, ನೋಡಕೇಸಿ, ಹೋಗಕೇಸಿ, ಬಂದಕೇರಿ, ಹೋಗಿಕೇರಿ, ನೋಡಕೇರಿ, ಮಾಡಕೇರಿ, ನೋಡದಪ್ಲೆ, ಆಗೇದ, ಮಾಡದಪ್ಲೆ ಆಗೇದ, ಉಂಡ್ರುಪ್ಲೆ ಹೋದ, ನೋಡಟ್ಗೆ, ಮಾಡಟ್ಗೆ ಸಂಕ್ಷೇಪ ರೂಪದ ಬಳಕೆಗಳೂ ಇಲ್ಲಿ ಸಾಮಾನ್ಯ. ಕೊಡುತ್ತೇನೆ (ಕೊಡ್ತಾ) ಬರುತ್ತೇನೆ (ಬರ್ತಾ) ನೀರು ಸುರಿದುಕೋ (ಹುಯ್ಕೊ) ತಿನ್ನುವುದಿಲ್ಲ (ತಿನಾಲ) ಬರುವುದಿಲ್ಲ (ಬರಾಲ) ಉರ್ದು ಪದಗಳ ಮಿಶ್ರಿತ ನುಡಿಗಟ್ಟುಗಳು ಇಲ್ಲಿ ಬಳಕೆಯಲ್ಲಿವೆ. ಉದಾಹರಣೆಗೆ : ಅದಬ್ ಹೊಡ್ಕಕುಂತ, ಮನ ಮಾನಿ ರೊಕ್ಕ ಖ್ಯಾಲ ಮಾಡು, ಪೀಚಾ ಬೀಳು, ಭರ್ಚಕ ಮಾಡಿ. ಟಾಕಿ ಢೀಲಾ ಆಗು, ಖಿರಾಯ್ದ ಮನಿ ಖತಲ್ ಮಾಡು.

ವಾಕ್ಯ ಮಟ್ಟದಲ್ಲೂ ಕಲಬುರ್ಗಿ ನಾಡಿನ ಕನ್ನಡ ಭಾಷೆ ವೈಶಿಷ್ಟ್ಯಪೂರ್ಣವಾಗಿರುವುದನ್ನು ಕಾಣುವೆವು. ವಾಕ್ಯಮಧ್ಯದಲ್ಲಿ ವ್ಯಂಜನಾಂತ ಶಬ್ದಗಳು ಬಳಕೆಗೊಳ್ಳುತ್ತಿರುವುದು ಇಲ್ಲಿ ವಿಶೇಷವಾಗಿದೆ. ಉದಾಹರಣೆಗೆ 'ನಾಟಕ ನೋಡಲಿಕ್ ಜನಾ ಭಕ್ಕಳ ಬಂದಿದ್ರು', 'ಹಪ್ಪಳ್ ಕರೀಲಿಕ್ ಸುರು ಮಾಡಾಣ ಧ್ಯಾಡೆ ಎಣ್ಣೆ ಕಡಿಮಿ ಬಿತ್ತು'.

ಆಧುನಿಕ ಭಾಷಾವಿಜ್ಞಾನದ ಮೂಲ ತತ್ತ್ವಗಳ ಹಿನ್ನೆಲೆಯಲ್ಲಿ ಕಲಬುರ್ಗಿ ನಾಡಿನ ಕನ್ನಡ ಭಾಷೆಯನ್ನು ವಿಶ್ಲೇಷಣೆಗೆ ಒಳಪಡಿಸಿ ಇಲ್ಲಿ ಅವಲೋಕಿಸಬಹುದು. ಸದ್ಯ ಕಲಬುರ್ಗಿ ನಾಡಿನಲ್ಲಿ ಪ್ರಚಲಿತದಲ್ಲಿರುವ ಕನ್ನಡ ಭಾಷೆಯ ಸ್ವರೂಪವನ್ನು ಜನರ ನಾಲಿಗೆಯ ಮೇಲೆ ಸದ್ಯ ನಲಿಯುವ ಭಾಷೆಯ ತಾಜಾತನವನ್ನು ಇಲ್ಲಿ ಅಧ್ಯಯನ ಮಾಡಬಹುದು. ಆಧುನಿಕ ವರ್ಣನಾತ್ಮಕ ಭಾಷಾವಿಜ್ಞಾನದ ನಿಯಮಗಳನ್ವಯ ಭಾಷೆಯನ್ನು ವಿಶ್ಲೇಷಿಸುವಾಗ ಈ ಪ್ರದೇಶದಲ್ಲಿರುವ ಧ್ವನಿಮಾಗಳೆಷ್ಟು? ಆಕೃತಿಮಾಗಳ ಸ್ವರೂಪ ಎಂಥದು ಮತ್ತು ವಾಕ್ಯಗಳ ರಚನೆ ಎಂತು? ಎಂಬಿತ್ಯಾದಿ ಅಂಶಗಳನ್ನು ಇಲ್ಲಿ ವೈಜ್ಞಾನಿಕವಾಗಿ ನಿರೂಪಿಸಲಾಗಿದೆ. ಕಲಬುರ್ಗಿ ನಾಡಿನ ಭಾಷೆಯ ಕೆಲವು ಮಹತ್ವದ ವರ್ಣನಾತ್ಮಕ ಭಾಷಾವಿಜ್ಞಾನದ ಅಂಶಗಳನ್ನು ಹೀಗೆ ಗುರುತಿಸಬಹುದು.

ಕಲಬುರ್ಗಿ ನಾಡಿನ ಕನ್ನಡ ಭಾಷೆಯಲ್ಲಿರುವ ಸಮಗ್ರ ಧ್ವನಿಮಾಗಳು ಹೀಗಿವೆ :

ಸ್ವರಗಳು : ಅ, ಇ, ಉ, ಒ, ಆ, ಈ, ಊ, ಏ, ಓ

ವ್ಯಂಜನಗಳು : ಕ್, ಚ್, ಟ್, ತ್, ಪ್, ಗ್, ಜ್, ಡ್, ದ್, ಬ್, ನ್, ಣ್, ಮ್, ಯ್, ರ್, ಲ್, ವ್, ಸ್, ಹ್, ಳ್

ಅನ್ಯಭಾಷಾ ಸ್ವೀಕೃತ : ಫ್(F) ಜ್(Z) ಖ್(X)

ಸಂಸ್ಕೃತದಿಂದ ಬಂದ ಮಹಾಪ್ರಾಣಗಳು : ಖ್, ಛ್, ಠ್, ಢ್, ಫ್, ಘ್, ಝ್, ಥ್, ಧ್, ಭ್ ಇವನ್ನು ಸುಶಿಕ್ಷಿತರು ಮಾತ್ರ ಬಳಸುವರು. ಗ್ರಾಮೀಣ ಜನ ಇವುಗಳನ್ನು ಅಷ್ಟಾಗಿ ಬಳಸರು. ಞ, ಜ್ ಇವು ಉಪಧ್ವನಿಮಾಗಳಾಗಿ ಬಳಕೆಗೊಳ್ಳುತ್ತವೆ.

ಉದಾ : ಕುಂಚಿ, ಚಿಜ್ಜಿ, ತಟ್ಟಿ, ಕಟ್ಟಿ, ಗುಡಿ, ಚೀಳ್ಳಿ, ಡಬ್ಬಿ, ಬಾರ್ಗಿ, ಕಣ್ಣು, ಮನಿ, ಯಾರು, ಬಲ್ಲಿ, ವಾರಿ, ಸರ್ಗಿಹಳ, ಡಜನ್, ಘಜಲ್, ಖೊಲ್ಲಿ, ಘಂಟಾ, ಥೇಟ, ಒಳಖಾಸ, ತನಖಾ.

ಕಲಬುರ್ಗಿ ನಾಡಿನ ಕಣ್ಣಿನ ಭಾಷೆಯಲ್ಲಿ ಕೆಲವಡೆ ಅಲ್ಪ ಪ್ರಾಣ ವ್ಯಂಜನಗಳನ್ನು ಮಹಾಪ್ರಾಣಗಳಾಗಿಸಿ ಬಳಸುವುದುಂಟು.

ಉದಾ : ಟೈಂ > ಠೇಮ, ಕಬ್ಬು > ಖಬ್ಬು, ಜುಣಕ > ಝುಣಕ, ನ್, ಳ್, ನ್, ಸ್, ಚ್, ರ್, ಡ್, ಜ್, ಧ್ವನಿ ವ್ಯತ್ಯಾಸಗಳು ಹಲವು ಸ್ವಚ್ಛಂದವಾಗಿ ಪರಿವರ್ತನೆಗೊಂಡು ಬಳಕೆಗೊಳ್ಳುವುದುಂಟು.

ಉದಾ : ಮುಂಜಾನೆ > ಮುಂಜಾಳೆ, ದಭಾಲೆ > ದಭಾಳೆ, ಉಣ್ಣು > ಉಳ್ಳು, ಸಂಜೆ > ಚಿಂಜೆ, ಇಣಜಿ > ಇಣಚಿ

ಮೂರಕ್ಷರಗಳ ಪದಗಳಲ್ಲಿ ಕೆಲವೆಡೆ ಕೊನೆಯ ಅಕ್ಷರ ಲೋಪಗೊಳ್ಳುವುದುಂಟು.

ಉದಾ : ಅಡಿವೆ - ಅಡಿ, ಮದುವೆ - ಮದಿ

ಆಕೃತಿಮಾ ಹಂತದಲ್ಲಿ ಬಳಕೆಗೊಳ್ಳುವ ಶಬ್ದಗಳು ಇಲ್ಲಿ ವಿಶೇಷವಾಗಿವೆ.

ಉದಾ : ದೇರು - ದೆರು, ಗೋಳು - ಗೊಳ ಈ ಬಹುವಚನ ಪ್ರತ್ಯಯಗಳು ಸಂಬಂಧವಾಚಿ ನಾಮಗಳಿಗೆ ಹತ್ತುವಂತಹವು.

ಉದಾ : ಅಣ್ಣದೇರು - ಅಣ್ಣದೆರು, ತಮ್ಮದೆರು

ಕುರಿಗೋಳ - ಕುರಿಗೊಳ, ಮನಿಗೊಳ

ಗುರುಗೋಳ - ಗುರುಗೊಳ

ಅಪ್ಪಗೋಳ - ಅಪ್ಪಗೊಳ

ಶಿಷ್ಟರಲ್ಲಿ ಕಲಿತವರಲ್ಲಿ, ಅವನು, ಇವನು, ಅವರು, ಇವರು, ಅದು, ಇದು, ಎಂಬ ಸರ್ವನಾಮಗಳು ಜನಪದರಲ್ಲಿ, ಆಡುನುಡಿಯಲ್ಲಿ ಕವ, ಶಿವ, ಕಲರು, ಕಿವರು, ಕದು, ಕಿದು ಬಳಕೆಗೊಳ್ಳುವುದುಂಟು.

ಸ್ಥಳವಾಚಕ ಸರ್ವನಾಮಗಳಲ್ಲಿ - ಅಲ್ಲಿ, ಇಲ್ಲಿ, ಆಕಡೆ, ಈಕಡೆ, ಆಚೆಗೆ, ಈಚೆಗೆ, ಎಂಬ ಶಬ್ದಗಳು ಕಲ್ಲಿ, ಕಿಲ್ಲಿ, ಕಕಡೆ, ಕಿಕಡೆ, ಕಾಚೆಗೆ, ಕೀಚೆಗೆ ಎಂದು ಬಳಕೆಗೊಳ್ಳುತ್ತವೆ.

ಪರಿಮಾಣವಾಚಕ ಸರ್ವನಾಮಗಳಲ್ಲಿ -

ಅಷ್ಟು - ಅಟ್ಟು, ಕಟ್ಟು - ಕಾಟು

ಇಷ್ಟು - ಇಟ್ಟು, ಕಿಟ್ಟು - ಕೀಟು

ಇಲ್ಲಿನ ಭಾಷೆಯಲ್ಲಿ ಕೆಲವು ವಿಶಿಷ್ಟ ವಿಶೇಷಣ ಪದಗಳಿರುವುದನ್ನು ಕಾಣುವೆವು.

ಉದಾ : ಮಾರಾಯ್ನ, ಮಸ್ತ, ತೋಲ, ದುನಿಯಾದ್

ವಿಭಕ್ತಿ ಪ್ರತ್ಯಯಗಳು :

ಇಲ್ಲಿ ಲಿಂದ - ಪಂಚಮೀ ವಿಭಕ್ತಿಯಾಗಿ ಬಳಕೆಯಲ್ಲಿದೆ.

ಉದಾ : ಬಾಜಾರಲಿಂದ, ಮನಿಲಿಂದ, ಶಾಲೆಲಿಂದ

ಕೆ, ಗೆ - ಚತುರ್ಥಿ ವಿಭಕ್ತಿಗೆ ಬದಲಾಗಿ ಗ್, ಕ್ ಗಳು ಬಳಕೆಯಲ್ಲಿವೆ.

ಉದಾ : ಹ್ವಲಕ ನಡಿ, ಬಾಲ್ಯಾಗ ತಿನ್ನಿದ, ಮಗಲಿಗೆ ಖಳ್ಸ

ಒಳ್ - ಸಪ್ತಮಿ ವಿಭಕ್ತಿಗೆ ಬದಲಾಗಿ - ಆಗ, ಒಳಗ ಬಳಕೆಯಲ್ಲಿವೆ.

ಉದಾ : ಕಾಲಾಗ, ಮನಿಯಾಗ, ಗಿಡದೊಳಗ

ಇಲ್ಲಿನ ಭಾಷೆಯಲ್ಲಿನ ಆಖ್ಯಾತ ಪ್ರತ್ಯಯಗಳನ್ನು ಹಾಗೂ ಅವುಗಳಿಗೆ ಉದಾಹರಣೆಗಳನ್ನು ಇಲ್ಲಿ ಕೊಡಬಹುದು

| ಏಕವಚನ | ಬಹುವಚನ | ಉದಾಹರಣೆಗಳು |
|---|---|---|
| ಈ, ನಿ | ಈ, ವಿ | ಹೊಂಟೀನಿ, ಹೊಂಟೀವಿ |
| ಇ, ಇದಿ | ಈ, ರಿ | ಹೊಂಟಿ, ಹೊಂಟೀರಿ, ಹೊಂಟೀದ್ರಿ |
| ಅನ | ಅ, ರ | ಹೊಂಟಾನ, ಹೊಂಟಾಳ, ಹೊಂಟಾವ |
| ಅಳ | ಅ, ವ | ಹೊಂಟಾದ, ಹೊಂಟಾವ |

"ಅಲ್ಲ" (ಅಲ) ಎಂಬ ನಿಷೇಧ ಪ್ರತ್ಯಯವು ಕ್ರಿಯಾ ಪ್ರತಿಪಾದಕಗಳಿಗೆ ಇಲ್ಲಿ ನೇರವಾಗಿ ಅನ್ವಯವಾಗುವುದು.

ಉದಾ : ಬರಲ್ಲ - ಬರಾಲ - ಬರುವುದಿಲ್ಲ

ಹೋಗಲ್ಲ - ಹೋಗಲ, ಹೋಗುವುದಿಲ್ಲ

ತಿನ್ನಲ್ಲ - ತಿನಾಲ - ತಿನ್ನುವುದಿಲ್ಲ

ಕಲಬುರ್ಗಿ ಕನ್ನಡ ಭಾಷೆಯಲ್ಲಿ ಕೇರಿ - ಕೇಸಿ ಸಹಾಯಕ ಕ್ರಿಯಾಪದಗಳು ವಿಶೇಷವಾಗಿ ಬಳಕೆಯಲ್ಲಿವೆ.

ಉದಾ : ತಿಂದಕೇಸಿ, ಮಾಡಕೇಸಿ, ಹೇಳಕೇಸಿ

ತಿಂದಕೇರಿ, ಮಾಡಕೇರಿ, ಹೇಳಕೇರಿ

ಧ್ವನಿಮಾ : ಆಕೃತಿಮಾ ಮಟ್ಟದಲ್ಲಿ ಕಲಬುರ್ಗಿ ನಾಡಿನ ಕನ್ನಡ ಭಾಷೆಯಲ್ಲಿ ಹೀಗೆ ವಿಶಿಷ್ಟ ಅಂಶಗಳನ್ನು ಗುರುತಿಸಿದಂತೆ ವಾಕ್ಯಮಟ್ಟದಲ್ಲೂ ಗುರುತಿಸಬಹುದು. ಶಿಷ್ಟ ಕನ್ನಡದಿಂದ ಇಲ್ಲಿ ಬಳಕೆಗೊಳ್ಳುವ ಈ ಕೆಳಗೆ ಉದಾಹರಿಸಿದ ವಾಕ್ಯಗಳು ಭಿನ್ನವಾಗಿರುವುದನ್ನು ಕಾಣುವೆವು.

ಉದಾ : 'ಮನಸ್ಯಾರಟ್ಟಿ ಮುರ್ದಹೊಟ್ಟಿ ಘುಂಬ್ಯೊಬೇಕು'

'ಅಂವಾ ಏನ್ರಿ ಮಸ್ತ ಘಸಮೂರ ಹನಾ'

'ಅಜೀಬಾತ್ ನಾ ಈ ಸುದ್ದಿ ಕೇಳಿಲ್ಲ'

'ರುಪ್ಯೆ ನಗ್ದಿ ಕುಡ್ತೀನಿ'

'ಬುಟ್ಟಿ ಕಲ್ಲಿ ಖೊಲ್ಲ್ಯಾಗ ಅದಾ ಏನ್ ನೋಡು'

'ಈಗ ಮೂರು ಬಡದದ'

'ಭೀಟು ಹೊರಗೊಯ್ದು ಭೀಟು'
'ಏನ ಅಡಿಹೊಂಬ ಇದ್ದ್ಯೋ ಮನಸ್ಯಾನೀ'
'ಸೊಲ್ಲಾಪೂರ ಮ್ಯಾಲ ನೆಹರೂನ ನೋಡೀನಿ'
'ಸರಿ ಬೀಳಲ್ಲ ನಮ್ಮದು ನಮಗ, (ನಮ್ಮದು ನಮಗೆ ಸಾಲುವುದಿಲ್ಲ)'
'ಕವಾ ಅಂದಾ ಕಿ ನಾಭಿ ನಿನ್ನ ಸರೆ ಬರ್ತಾ'
'ಬರ್ತೇರಿ ಲಡಸ್ಲಾಕ'
'ಅವು ಎಂಟ ಮಳಾ ಅವ'
'ಲಗ್ನಕ ಢಿಗಾರಿ ಢಿಗಾರಿ ನೆಂಟ್ರ ಬಂದಿದ್ರು'
'ನೀರು ಕೊಂಡೇನ?'
'ಎತ್ತ ಹೋಯ್ತಿ'
'ನಾ ಛಬ್ಬಡ್ಯಾ ಬಸ್ಸಿಗೆ ಹೋಯ್ತ'
'ಇಲ್ಲಿ ತಡ್ಯಾಲ ಹೊಯ್ತ ಮನಸ'
'ಕಬೂಲಿ ತಗೊಂಡ ಕೇಸಿ ಪರವಾನಿ ಬಿಟ್ಟ'
(ಒಪ್ಪಿಗೆಯನ್ನು ತೆಗೆದುಕೊಂಡು ಪರವಾನಿಗಿ ನೀಡಿದ)
'ಅವನ ತಾಗ ಒಂದೇ ರೂಪಾಯಿ ಆದ'
'ಅಂವ ಬಿಲ್ಕೂಲ ಲಾಯಕ್ಕಿಲ್ಲ'
'ಒಂದ ಪದ ಒಗಾಸ ಪಾಯಣ್ಣ'
'ಈಗ ಠೇಮ್ ಎಷ್ಟ ಆಗೇದ'

ಕಲಬುರ್ಗಿ ನಾಡಿನ ಕನ್ನಡ ಭಾಷೆಯಲ್ಲಿ ಈ ಕೆಳಗಿನ ನಾಲ್ಕು ಪ್ರಮುಖ ಭಾಷಾ ಪ್ರಭೇದಗಳನ್ನು ಗುರುತಿಸಬಹುದು.

೧. ಕಲಬುರ್ಗಿ - ಚಿಂಚೋಳಿ ಪ್ರಭೇದ
೨. ಆಳಂದ - ಅಫಜಲಪೂರ ಪ್ರಭೇದ
೩. ಸೇಡಂ - ಯಾದಗಿರಿ, ಚಿತ್ತಾಪೂರ ಪ್ರಭೇದ
೪. ಜೇವರ್ಗಿ - ಶಹಾಪೂರ, ಸುರಪೂರ ಪ್ರಭೇದ

ಈ ನಾಲ್ಕು ಪ್ರಭೇದಗಳಲ್ಲಿ ಬಳಕೆಯಲ್ಲಿರುವ ಕನ್ನಡವು ಅಲ್ಪಸ್ವಲ್ಪ ವ್ಯತ್ಯಾಸಗೊಂಡು ಬಳಕೆಯಲ್ಲಿರುವುದನ್ನು ಕಾಣುವೆವು. ಈ ವ್ಯತ್ಯಾಸವು ನಿರ್ದಿಷ್ಟವಾಗಿ ಗೆರೆ ಕೊರೆದು ಹೇಳಲಿಕ್ಕೆ ಆಗದಿದ್ದರೂ ಪ್ರಮುಖ ಉದಾಹರಣೆಯನ್ನು ಇತ್ತು ಭಾಷಾ ಭಿನ್ನತೆಯನ್ನು ಗುರುತಿಸಬಹುದಾಗಿದೆ. ಹಾಗೆ ನೋಡಿದರೆ ಯಾವೊಂದು ಪ್ರದೇಶದ ಜೀವಂತಭಾಷೆಯಲ್ಲಿ ಇಂಥ ಪ್ರಾದೇಶಿಕ ಭಾಷಾ ಪ್ರಭೇದಗಳು ಇದ್ದೇ ಇರುತ್ತವೆ. ಇವು ಇದ್ದಾಗಲೇ ಭಾಷೆ ಜೀವಂತವಾಗಿರಲು, ನಿತ್ಯ ವ್ಯವಹಾರದಲ್ಲಿ ಮುಖಾಮುಖಿಯಾಗಿ ಸ್ಪಂದನಗೊಳ್ಳುತ್ತ ಇರಲು ಸಾಧ್ಯ.

**೧. ಕಲಬುರ್ಗಿ ಚಿಂಚೋಳಿ ಪ್ರಭೇದ**

ಚಿಂಚೋಳಿ ಆಂಧ್ರದ ಗಡಿಯಲ್ಲಿದ್ದರೂ ಇಲ್ಲಿ ತೆಲುಗು ಭಾಷಾ ಪ್ರಭಾವ ಅಷ್ಟೇನೂ ಆಗಿಲ್ಲ. ಈ ಪ್ರಭೇದ ಭಾಷೆಯ ವಿಶೇಷವೆಂದರೆ ಅನ್ಯಭಾಷೆಯಿಂದ ಸ್ವೀಕೃತವಾಗಿ ಬಳಕೆಗೊಳ್ಳುವುದು ಇಲ್ಲಿನ ವೈಶಿಷ್ಟ್ಯವಾಗಿದೆ.

ಉದಾ : ರಿಕಾವು - ರಿಕಾವ್, ಬಹನ್ > ಬೇನ್

ಅವರಿಗೆ - ಅವರೀಗ್, ನಾಟಕ > ನಾಟಕ್

ನೋಡಲಿಕ್ಕೆ - ನೋಡಳಿಕ್, ಮಾಡಲಿಕ್ಕೆ > ಮಾಡಳೀಕ್

ಈ ಪ್ರಭೇದದಲ್ಲಿ ಸ್ತ್ರೀಯರನ್ನು ಸಂಬೋಧಿಸುವಾಗ ಏನಮ್ಮಾ ಎಂಬ ಶಬ್ದದ ಕೊನೆಗಿರುವ 'ಮ್ಮಾ'ದ ಬದಲಾಗಿ 'ಗೆ' ಧ್ವನಿಮಾ ಬಳಕೆಗೊಳ್ಳುವುದು ಕಾಣುವೆವು.

ಏನಮ್ಮಾ - ಏನಗೆ, ಅಲ್ಲಮ್ಮಾ - ಅಲ್ಲಗೆ, ಬಾರಮ್ಮಾ - ಬಾರಗೆ

ಗಂಡಸರನ್ನು 'ಅಪ್ಪ' ಎನ್ನುವ ಬದಲು 'ಎಪ್ಪ'ಯಪ್ಪ 'ಅ' ಬದಲು ಎ ಹಾಗೂ ಯ ಧ್ವನಿಮಾ ಬಳಕೆಗೊಳ್ಳುವುದುಂಟು. 'ಸ' ದಿಂದ ಆರಂಭಗೊಳ್ಳುವ ಶಬ್ದಗಳು ಇಲ್ಲಿ ಚ ದಿಂದ ಆರಂಭಗೊಳ್ಳುವುದು ವಿಶೇಷವಾಗಿದೆ.

ಉದಾ : ಸಜ್ಜ - ಚೆಜ್ಜ, ಸೀತಾಫಲ - ಚೀತಾಫಲ, ಸಂಜೆ - ಚಂಜಿ

ಅಲ್ಪಪ್ರಾಣ ಧ್ವನಿಮಾಗಳ ಬದಲು ಇಲ್ಲಿ ಮಹಾಪ್ರಾಣಗಳ ಬಳಕೆ ಹೆಚ್ಚಾಗಿದೆ.

ಬಂಗಾರ - ಭಂಗಾರ, ಬಕ್ರಿ -ಭಕ್ರಿ, ಕಾರ - ಖಾರ, ಬೆಲ್ಲ - ಭೆಲ್ಲ, ತಟ್ಟಿ - ಥಟ್ಟಿ, ತಾಟು - ಥಾಟು

ಈ ಪ್ರದೇಶದ ಭಾಷಾ ಪ್ರಭೇದದಲ್ಲಿ ಕೆಲವು ತೆಲುಗು ಶಬ್ದಗಳು ಸೇರಿಕೊಂಡುದನ್ನು ಗುರುತಿಸುವೆವು.

ಜೀತದಾಳು - ಜೀತಗಾಡು, ಇಲಿ - ಇಚಾಬತ್ತರಾಶಿ, ಗುಂಪು - ಕುಪ್ಪಾ ಕುಪ್ಪೆ, ಹೆಣ್ಣುಮಗಳು - ಪಿಲ್ಲಿ, ದೊರೆ - ದೊರಾ, ಹೆಣ್ಣುಮಗು - ಪಿಲ್ಲವಾಕು

**೨. ಆಳಂದ - ಅಫಜಲಪೂರ ಪ್ರಭೇದ**

ಈ ಎರಡು ತಾಲ್ಲೂಕುಗಳು ಮಹಾರಾಷ್ಟ್ರಕ್ಕೆ ಹೊಂದಿಕೊಂಡಿದ್ದು ಇಲ್ಲಿನ ಭಾಷೆಯ ಮೇಲೆ ಮರಾಠಿಯ ಪ್ರಭಾವ ದಟ್ಟವಾಗಿ ಆದುದನ್ನು ಕಾಣುವೆವು. ಪ್ರಶ್ನಾರ್ಥಕ ಶಬ್ದ ಏನು? ಏಕೆ? ಎಂಬುದು ಇಲ್ಲಿ ಯಾನು? ಯಾಕೆ? ಎಂದು ಬಳಕೆಗೊಳ್ಳುವುದು. ಇಲ್ಲಿ ಶಬ್ದಾದಿಯಲ್ಲಿರುವ ಏ ಅಕ್ಷರ ಆ ಆಗಿದೆ. ಇನ್ನೂ ಕೆಲ ಶಬ್ದಗಳ ಆದಿಯಲ್ಲಿ ಬರುವ ಓ ಕಾರ ಉ ಕಾರವಾಗುವುದನ್ನು ಕಾಣುವೆವು.

ಉದಾ : ತೋಟ - ತ್ವಾಟ (ಓ > ಆ)

ಕೋಣೆ - ಕ್ವಾಣೆ (ಓ > ಆ)

ದೋಸೆ - ದ್ವಾಸೆ (ಓ > ಆ)

ಕೊಡುತ್ತಾರೆ - ಕುಡ್ತಾರೆ (ಓ > ಉ)

ಇಲ್ಲಿ ಕೆಲವು ಶಬ್ದಗಳ ಕೊನೆಯಲ್ಲಿ ಅಕ್ಷರ ವ್ಯಂಜನವಾಗಿರುವುದು ವಿಶೇಷ, ನೋಡಲಿಕ್ಕೆ - ನೋಡಲಿಕ್, ಕುಂಕುಮ - ಕೂಕಮ್, ಮಾಡಲಿಕ್ಕೆ - ಮಾಡಳೀಕ್, ಬೀಗರು - ಬೀಗರ್ ಶಬ್ದ ಮಧ್ಯದಲ್ಲಿ ಇಲ್ಲಿ ಉ ಬರುವುದು ಸಾಮಾನ್ಯವಾಗಿದೆ.

ಇಬ್ಬರು > ಇಬ್ಬುರು, ಕಬ್ಬಿನ > ಕಬ್ಬುನ

ಇಲ್ಲಿ ಅಲ್ಪಪ್ರಾಣಯುಕ್ತ ಶಬ್ದಗಳು ತಪ್ಪು ಕಲ್ಪನೆಯಿಂದ ಮಹಾಪ್ರಾಣಯುಕ್ತ ಅಕ್ಷರಗಳನ್ನು ಹೊಂದಿ ಬಳಕೆಗೊಳ್ಳುತ್ತಿರುವುದು ಸಾಮಾನ್ಯವಾಗಿದೆ.

ಉದಾ : ಗಾಡಿ - ಘಾಡಿ, ಬಕ್ಕರಿ - ಭಕ್ಕರಿ,ಗಾಳಿ - ಘಾಳಿ, ಜಳಕ - ಝಳಕ, ಬಾಸಿಂಗ - ಭಾಸಿಂಗ, ದಾಟು - ಧಾಟು, ಜಗಳಾ - ಝಗಳಾ, ಕಳಿಸು - ಖಳಿಸು, ಬಂಗಾರ - ಭಂಗಾರ, ಚಪ್ಪರ - ಛಪ್ಪರ, ಬೆಳ್ಳಗೆ - ಭೆಳ್ಳಗೆ, ಬೀಗರು - ಭೀಗರು, ದಂಟು - ಧಂಟು, ಕಾರ - ಖಾರ, ಶಂಭರ (ನೂರ), ಬಾವಿ - ಭಾವಿ

ಆಕೃತಿಮಾ - ಈ ಪ್ರಭೇದ ಭಾಷೆಯಲ್ಲಿ ಒಂದಕ್ಷರದ ಆಕೃತಿಮಾದಿಂದ ಮೊದಲುಮಾಡಿಕೊಂಡು ಆರಕ್ಷರಗಳುಳ್ಳ ಆಕೃತಿಮಾಗಳು ಬಳಕೆಗೊಳ್ಳುವುದನ್ನು ಗುರುತಿಸಬಹುದಾಗಿದೆ.

ನಾ, ನೀ, ಬಾ, ಅಡಿ, ಲಗ್ಗಣ, ಹೋತಾಂ, ಹಿಂಡಪಲ್ಲಿ, ಸುರಕುಂಬಾ, ಬೀಸ್ರಾಮಗಡ, ಆಕ್ರಾಬಕ್ರಾಗೋಡಿ

**೩. ಯಾದಗಿರಿ - ಸೇಡಂ ಚಿತ್ತಾಪೂರ ಪ್ರಭೇದ**

ಯಾದಗಿರಿ - ಸೇಡಂ ಈ ಎರಡು ತಾಲ್ಲೂಕು ಆಂಧ್ರಕ್ಕೆ ಹತ್ತಿಕೊಂಡಿದ್ದರೂ ಇಲ್ಲಿ ತೆಲುಗು ಭಾಷೆಯ ಪ್ರಭಾವ ಅಷ್ಟಾಗಿ ಆಗಿಲ್ಲ.

ಈ ಪ್ರಭೇದ ಭಾಷೆಯಲ್ಲಿ ಶಬ್ದಾದಿಯಲ್ಲಿ 'ಹ' ಧ್ವನಿ ಲೋಪಗೊಳ್ಳುವುದು ವಿಶೇಷವಾಗಿದೆ.

ಉದಾ : ಹಣ್ಣು - ಅಣ್ಣು, ಹಾಲು - ಆಲು, ಹೆಣ್ಣು - ಎಣ್ಣು, ಹೋಳಿಗೆ - ಓಳಿಗೆ, ಹೋಲ - ವೊಲ, ಹೋಗುತ್ತೇನೆ - ಓಗುತ್ತೇನೆ, ಹಾನ - ಆನ, ಹಾಳ - ಆಳ, ಹಾರ - ಆರ

'ಕೊಂಡ' ಎಂಬ ಕ್ರಿಯಾಪದದಲ್ಲಿರುವ 'ಒ' ಸ್ವರ ಧ್ವನಿಗೆ ಬದಲಾಗಿ ಇಲ್ಲಿ 'ಎ' ಸ್ವರ ಧ್ವನಿಯನ್ನು ಉಚ್ಚರಿಸುವುದು ಸಾಮಾನ್ಯವಾಗಿದೆ.

ಉದಾ : ಮಲಗಿಕೊಂಡು - ಮಕ್ಕೆಂಡು (ಒ > ಎ)

ತಕ್ಕೊಂಡು - ತಕ್ಕೆಂಡು (ಒ > ಎ)

ತಿನಿಕೊಂತ - ತಿನಕೆಂತ (ಒ > ಎ)

ನೋಡಕೊಂತ ನೋಡಕೆಂತ (ಒ > ಎ)

ಹೋಗಕೊಂತ - ಹೋಗಕೆಂತ (ಒ > ಎ)

'ಸ' ಧ್ವನಿಯಿಂದ ಆರಂಭಗೊಳ್ಳುವ ಬಹುತೇಕ ಶಬ್ದಗಳು ಇಲ್ಲಿ 'ಚ' ಧ್ವನಿಯಿಂದ ಆರಂಭಗೊಳ್ಳುವುವು.

ಸೂಜಿ - ಚೂಜಿ (ಸ > ಚ)

ಸಜ್ಜೆ - ಚಿಜ್ಜೆ (ಸ > ಚ)

ಸಂಜೆ - ಚಂಜೆ (ಸ > ಚ)

ಸೀತಾಫಲ - ಚೀತಾಫಲ (ಸ > ಚ)

ಆಕೃತಿಮಾ - ಈ ಪ್ರಭೇದ ಭಾಷೆಯ ಮೇಲೆ ಉರ್ದುವಿನ ಪ್ರಭಾವವೂ ಆಗಿದೆ. ಈ ಕೆಳಗಿನ ವಿಶಿಷ್ಟ ಆಕೃತಿಮಾಗಳನ್ನಿಲ್ಲಿ ಕಾಣುವೆವು.

ತಲಾಟಿ, ತನಾಬಿ, ಕೇಲ, ಸೋಪಾನ, ಹೆಬ್ಬು, ಡ್ವಾಣ (ಹೊಲದ ಬದುವು), ಆತ, ಇತ, ಸಕ್ರಿ, ಕದಕ, ಕಂಬ್ಯಾಇಣ್ಕೆ, ಹುಳ್ಳಿ, ಬುರ್ಲಿಕೊಂಗಿ

**೪. ಜೇವರ್ಗಿ - ಶಹಪೂರ - ಸುರಪೂರ ಪ್ರಭೇದ**

ನಾಮಪದಗಳ ಉಚ್ಚಾರಣೆಯಲ್ಲಿ ಕೊನೆಗೆ 'ಜ' ಎಂಬ ಧ್ವನಿ ಹಚ್ಚುವುದು ಇಲ್ಲಿ ಸಾಮಾನ್ಯವಾಗಿದೆ.

ಫುಲೆ - ಫುಲಜಿ, ಶರಣಪ್ಪ - ಶರಣಪ್ಪಜಿ, ಶಂಕರೆಪ್ಪ - ಶಂಕರಪ್ಪಜಿ, ಪವಾರ - ಪವಾರಜಿ

'ಅ' ಸ್ವರ ಧ್ವನಿ ಇಲ್ಲಿ 'ಆ' ಆಗುವುದು ಸಾಮಾನ್ಯವಾಗಿದೆ. ಅದ-ಆದ. ಶಬ್ದಾದಿಯ 'ಹ'ಕಾರ ಲೋಪಗೊಳ್ಳುವುದು ಇಲ್ಲಿ ಸಾಮಾನ್ಯವಾಗಿದೆ. ಉದಾ : ಹೋಳಿಗೆ > ಓಳಿಗೆ, ಹಾಲು > ಆಲು, ಹಣ್ಣು > ಅಣ್ಣು, ಹೆಣ್ಣು > ಎಣ್ಣು

ಒಟ್ಟಿನಲ್ಲಿ ಕಲಬುರ್ಗಿ ಭಾಷೆ ಉರ್ದು, ಮರಾಠಿ ಭಾಷೆಯ ಪ್ರಭಾವಕ್ಕೊಳಗಾಗಿ ವಿಶಿಷ್ಟವಾಗಿ ರೂಪುಗೊಂಡಿದೆ. ಇಲ್ಲಿ ದ್ವಿಭಾಷಿಕತೆ ಹೆಚ್ಚು. ಪ್ರಾಚೀನ ಕನ್ನಡದ ಮೂಲ ರೂಪಗಳನ್ನು ಈ ಭಾಷೆಯಲ್ಲಿ ನಾವು ವಿಶೇಷವಾಗಿ ಕಾಣುವೆವು. ಮುಸ್ಲಿಂ ಸಂಸ್ಕೃತಿಯ ಪ್ರಭಾವ ಇಲ್ಲಿನ ಕನ್ನಡಿಗರ ಮೇಲೆ ವಿಶೇಷವಾಗಿ ಆಗಿದೆ. ಭಾಷೆಯ ಹಿಂದೆ ಜನತೆಯ ಭಾವನೆ, ಸಂಸ್ಕೃತಿ ಅಡಕಗೊಂಡಿರುವುದು ಸಾಮಾನ್ಯ. ಆಯಾ ಸಂಸ್ಕೃತಿಗಳ ಸಂಪರ್ಕದಿಂದ ಭಾಷೆ ತನ್ನದೇ ಆದ ವಿಶಿಷ್ಟ ರೂಪ ಪಡೆದುಕೊಳ್ಳುವುದುಂಟು. ಇದಕ್ಕೆ ಕಲಬುರ್ಗಿ ನಾಡಿನ ಕನ್ನಡ ಭಾಷೆಯೇ ಸಾಕ್ಷಿ. ಇಲ್ಲಿನ ಭಾಷೆಯ ವೈಶಿಷ್ಟ್ಯಗಳನ್ನು ಈ ರೀತಿ ಪಟ್ಟಿ ಮಾಡಬಹುದಾಗಿದೆ.

೧. ಕಲಬುರ್ಗಿ ನಾಡಿನ ಕನ್ನಡ ಭಾಷೆಯಲ್ಲಿನ ಮೂರು ಅಕ್ಷರಗಳುಳ್ಳ ಕೆಲವು ಶಬ್ದಗಳು ಅಂತ್ಯದ ಅಕ್ಷರವನ್ನು ಕಳೆದುಕೊಂಡು ಬಳಕೆಗೊಳ್ಳುವುದು ಸಾಮಾನ್ಯವಾಗಿದೆ.

ಉದಾ : ಮದುವೆ - ಮದಿ, ಅಡಿವೆ - ಅಡಿ

೨. ಅಲ್ಲಿ, ಇಲ್ಲಿ, ಎಲ್ಲಿ ಎಂಬ ದರ್ಶಕ ಸರ್ವನಾಮಗಳು ಕಲ್ಲಿ, ಕಿಲ್ಲಿ, ಕೆಲ್ಲಿ ಎಂದು ಬಳಕೆಗೊಳ್ಳುವುವು.

೩. ಅಷ್ಟು, ಇಷ್ಟು, ಎಷ್ಟು ಎಂಬ ಪ್ರಮಾಣವಾಚಕ ಪದಗಳು ಕಷ್ಟು, ಕಿಷ್ಟು, ಕೆಷ್ಟು, ಕಟು, ಕೀಟ, ಕೇಟು ಎಂದು ಬಳಕೆಗೊಳ್ಳುವುದುಂಟು.

೪. ಅವನು, ಇವನು, ಅವರು, ಇವರು, ಅದು, ಇದು ಎಂಬ ಸರ್ವನಾಮಗಳು ಕವ, ಕಿವ, ಕವರು, ಕಿವರು, ಕದು, ಕಿದು ಎಂದು ಬಳಕೆಗೊಳ್ಳುವುದುಂಟು.

೫. ಕೇಸಿ, ಕೇರಿ ಎಂಬ ಸಹಾಯಕ ಕ್ರಿಯಾಪದಗಳು ಹತ್ತಿಕೊಳ್ಳುವುದು ಇಲ್ಲಿ ಸಾಮಾನ್ಯ. ಮಾಡಿಕೇಸಿ, ನೋಡಿಕೇಸಿ, ನೋಡಿಕೇರಿ, ಹೋಗಿಕೇರಿ ಇತ್ಯಾದಿ.

೬. ಅಪ್ಲೆ - ಉಪ್ಲೆ ಎಂಬ ಪದಗಳು ಬಳಕೆಯಲ್ಲಿವೆ.

ನೋಡಿದಪ್ಲೆ, ಆಗೇದ, ಉಂಡ್ರುಪ್ಲೆ ಹೋದ

೭. ಇದ್ದಾನೆ, ಇದ್ದಾರೆ, ಇದ್ದಾಳೆ, ಎಂಬ ಕ್ರಿಯಾ ಪದಗಳು ಹನ, ಹಾನ, ಹಾರ, ಹರಾ, ಹಳಾ, ಹಾಳ ಎಂದು ಬಳಕೆಗೊಳ್ಳುವುದುಂಟು.

೮. ಅಪ್ಪುದು ಎಂಬುದು ಮೂಲ ರೂಪ ಇಲ್ಲಿ ಅಹುದು > ಹೌದು > ಹೌಂದು > ಹೊಯಿಂದ ಎಂದು ಬಳಕೆಗೊಳ್ಳುವುದುಂಟು

೯. 'ಹೊಂಟದ' ಎಂಬ ಪದ ಇಲ್ಲಿ ಬರುವದನ್ನ ಮಾತ್ರ ಸೂಚಿಸುವುದು ವಿಶೇಷವಾಗಿದೆ. ಉದಾಹರಣೆಗೆ ಬಸ್ಸು ಹೊಂಟದ.

೧೦. ಶಬ್ದಾಂತ್ಯದಲ್ಲಿ ವ್ಯಂಜನ ಬರುವುದು ಇಲ್ಲಿ ಸಾಮಾನ್ಯವಾಗಿದೆ.

ಉದಾ : ಕರೀಲಿಕ್, ಬೀಗರ್, ನೋಡಳಿಕ್, ಮಾಡಳೀಕ್

ಶಬ್ದಾದಿಯ 'ಹ' ವ್ಯಂಜನ ಹಲವು ಶಬ್ದಗಳಲ್ಲಿ ಇಲ್ಲಿ ಲೋಪಗೊಳ್ಳುವುದುಂಟು. ಉದಾ: ಹಣ್ಣು - ಅಣ್ಣು, ಹೆಣ್ಣು - ಎಣ್ಣು, ಹಾಲು - ಆಲು, ಹೋಳಿಗೆ - ಓಳಿಗೆ, ಹೇಳಿ - ಏಳಿ

೧೧. ಮರಾಠಿ ಹಾಗೂ ಉರ್ದು ಮಿಶ್ರಿತ ವಾಕ್ಯಗಳು ಬಳಕೆಗೊಳ್ಳುವುದು ಇಲ್ಲಿ ಸಾಮಾನ್ಯವಾಗಿದೆ.

ನಾನು ಛಬ್ಬಡೆ ಬಸ್ಸಿಗೆ ಹೋಯ್ತಾ ಬಾಜಾರಕರೆ ಹೋಗಿಬಾ, ಘಸಮೂರ ಹನಾ, ಮುಸ್ಕಿಲ್ ಆಗೇದ್, ಪರೇಶಾನ ಆಗೇದ

೧೨. ಬಂದೀವು, ಹೋಗಿವು, ಹೋಗಾರಿ, ಹೋಗಾಮು ಇಂಥ ಕ್ರಿಯಾ ಪದಗಳ ಬಳಕೆ ಹೆಚ್ಚು.

ಉದಾ : ಪರವಾನಿಗಿ ಬಿಟ್ಟ - ಅನುಮತಿ ಕೊಟ್ಟ

ಕಬೂಲ ಬಿಡು - ಒಪ್ಪಿಗೆ ಕೊಡು

೧೩. ವಿಶಿಷ್ಟ ನುಡಿಗಟ್ಟುಗಳ ಬಳಕೆ ಇಲ್ಲಿ ಪ್ರಯೋಗಗೊಂಡುದುಂಟು.

ಟಾಕಿ ಢೀಲ ಆತು - ಗಾಬರಿಯಾಯಿತು

ಸೋಸಿ, ಸೋಸಿ ಅಳಾದು - ಭೋರಾಡಿ ಅಳುವುದು

ಘುರತಟಿ ಹಿಡಿ - ಜಾಡುಹಿಡಿ

೧೪. ಕಲಬುರ್ಗಿ ನಾಡಿನ ಕನ್ನಡ ಭಾಷೆಯಲ್ಲಿ ಬಳಕೆಗೊಳ್ಳುತ್ತಿರುವ ಅನ್ಯ ಭಾಷೆಯ ಶಬ್ದಗಳು ಹೇರಳವಾಗಿವೆ. ಅವುಗಳನ್ನಿಲ್ಲಿ ಹೀಗೆ ಪಟ್ಟಿ ಮಾಡಬಹುದು.

**ಅರಬ್ಬಿ :** ಖತಲ್, ಉರುಸು, ಸೈತಾನ, ಹಕೀಮ, ಫೌಜದಾರ, ಬುರ್ಜ, ಜಿಲ್ಲಾ, ತಹಸೀಲ್, ಶಾರ, ಮುನಸೂಫ್, ಮುನೀಮ, ವಕೀಲ, ಸಾಹೇಬ, ಅದಾಲತ್, ಅಮಲ, ಗಂಜ, ಅಖರಿ, ಅದಾಬ (ನಮಸ್ಕಾರ), ಜರೂರ ಜಲ್ದಿ, ಜವಾಬ್, ಜಾಮೀನ, ಜಾಹೀರ್, ಜಿದ್ದು, ತಪಾಸ್, ತಕರಾರ, ಹಕೀಕತ (ನಿಜಸಂಗತಿ), ತಾಬಾ, ತಾರೀಖು (ಖಟ್ಲೆ), ನಜರ, ಬಾಬತ್, ಮಂಜೂರ, ಮಜಬೂತ್, ಆದಮಿ, ಇನಾಮ, ಕಬೂಲಿ, ಕಾನೂನ, ಕಾಯಂ, ಕಿದಮತ್ (ಸೇವೆ), ಖತಂ, ಖ್ಯಾಲ (ಆಸಕ್ತಿ), ಖಾಸಗಿ, ಖಾಸ (ಸ್ವಂತ), ಗುಲಾಮ, ಗೈರಹಾಜರ, ಜಕಾತಿ, ಜಮಾ, ಮತಲಬಿ (ತಂತ್ರ), ಮಾಪ್, ಮಾಮಲಾ (ವಿಷಯ), ಮುಕಬಲ್, ಮುದ್ದತು (ಕಾಲಾವಧಿ), ಮುಷ್ಕಿಲ (ಕಠಿಣ), ರಕಮು, ರದ್ದು ವಗೈರೆ, ವಜಾ, ವತನದಾರ, ವಾಯಿದೆ, ವಾರಸದಾರ (ಹಕ್ಕುದಾರ), ಶಾಮೀಲು, ಪರ್ತ, ಶುರು, ಸಲಾ (ಸೂಚನೆ), ಸಲಾಂ, ಸವಾಲು, ತಂಬೂರಿ, ಜಲಸಾ, ನಾಲಾ, ಕಿರಾಯ, ತಗಲ್ (ಸುಳ್ಳು), ದಲಾಲ (ಎಜೆಂಟ್), ಬಾಕಿ, ಮಜಕೂರ (ಸುದ್ದಿ), ಹಿಸೆ (ಪಾಲು), ಸರಾಫ್ (ಅಕ್ಕಸಾಲಿಗ), ಹಿಸಾಬ (ಲೆಕ್ಕ), ಪಾಯಿದೆ (ಲಾಭ), ದಗಲಬಾಜಿ (ವಂಚನಕೋರ), ಜುಬ್ಬ, ಸೈತಾನ.

**ಫಾರಸಿ -** ಗುಲಾಲು, ದರ್ಗಾ, ಸಮಾಜ, ಮುಲ್ಲಾ, ಖೂನಿ (ಕೊಲೆ), ಗಸ್ತ (ಕಾವಲು), ಜಂಬೆ, ಸರಂಜಾಮು, ಸಿಪಾಯಿ, ಕಾರಕೂನ, ಚಾಕರಿ, ಜಮೀನ್ದಾರ, ಜವಾನಿ, ಬಾದಶಹ (ರಾಜ), ಹವಾಲ್ದಾರ, ಖುಷಿ, ಆಸಪಾಸ್, ಗುಮಾನಿ (ಸಂದೇಹ), ಛಾಪ, ಜಬರು, ಜಬಾನಿ (ಹೇಳಿಕೆ), ವರದಿ, ಜಮೀನ, ಜಾಗೀರ, ರಾಜೀನಾಮೆ, ಶಿಫಾರಿಸ್, ಸಿಸ್ತ, ಸಜಾ, ಕಾಗದ,

ಜಾದು, ಸಿತಾರ, ಶಹನಾಯಿ, ಪರದೆ, ಫೈಲವಾನ, ಮೈದಾನ್, ಚಾಬೂಕ, ಲಗಾಂ, ಸವಾರಿ, ಕಬೂತರ, ಜಾನವಾರಖ, ಖರಾಬ, ಜಿರಾಯತ (ಒಕ್ಕಲತನ), ಅನಾಜ, ಖರೀಫ್ (ಮುಂಗಾರು ಬೆಳೆ), ಜಿಂದಗಾನಿ (ಬದುಕು), ರೈತ, ಇಲಾಜ, ಅಜಾರಿ, ಜುಲಾಬ, ದವಾಖಾನೆ, ಗರಮೀ, ಕಮ್ಮೀ, ಕಾರಖಾನೆ, ಗುಂಜಾಯಿಷ, ಗಲ್ಲೆ, ಜಕೇರಿ, ದುಕಾನ್, ದುಬಾರಿ, ಖಜಾನಿ, ರವಾನೆ, ಗುಲಾಬಜಾಮೂನ, ಜಲೇಬಿ, ಬರ್ತಿ, ಜಾಂಗೀರ, ಇಜಾರ, ಪಾಯ್ ಜಾಮ್, ರುಮಾಲು, ಕಸೂತಿ, ಕಿಸೆ, ನಿಶಾನಿ, ಕುರ್ಚಿ, ಸೆರೆ, ಶರಬತ್, ಜರ್ದಾ, ದಾರು, ಮಸ್ತ, ಚಮಚಿ, ಇಮಾರತಿ, ಮಿನಾರ, ನಾಲಾಯಕ, ಬದ್ನಾಮಿ, ಬದ್ಮಾಶ, ಬೇಕೂಫ್, ಲಫಂಗ್, ಲುಚ್ಚಾ, ನಕಾರಾ, ನಸೀಬ, ಬಿಲಕುಲ್, ಮಜಾ, ಮುಲಾಜ, ಮೆಹನತ್, ರಿವಾಜ್, ವಜನ್, ಫರಕ, ಹಜಾಮ, ಹರಕತ್, ಹಿಕಮತ್ (ಉಪಾಯ), ಹಿಮ್ಮತ್ತ, ಆಬ್ರು, ಆವಾಜ, ಎಕದಂ, ಚಷ್ಮಾ ಚಾಲಾಕ, ಜಾಸ್ತಿ, ತಾಜಾ, ದಮ್, ದುರಸ್ತಿ, ದೋಸ್ತ, ನರಮ್, ಫಾತಿ, ಫಜೀತಿ, ಬರಾಬರ, ಭರೋಸ, ರೋಜಿ, ವಾಜಿಮಿ, ವಾಪಸ್, ಸುಸ್ತಿ, ಹತ್ಯಾರ, ಗುಜ್ಜ (ಕಿರಿದು), ಕುಳ್ಳಿ, ಅವಾತ (ಅಂದು), ಗಲ್ಲಿ, ಚಿಡಿ, ತರಕ (ನೆನಪು), ಸಡಕ (ರಸ್ತೆ), ನಿಗಾ, ಉಡಾಸು (ಹಾರಿಸು), ಬುಡ್ಡಿ (ಕುಳ್ಳ ಹೆಂಗಸು), ಹುಡದಿ (ಗದ್ದಲ), ಅಳ್ಳ (ಚುರಮೂರಿ), ಹಿಸ್ಸ, ಜೇಬು, ತೇಜ, ಬಾಕ್ಯಾ (ತಲೆಹಿಡುಕ), ಜಬ್ಬರುಕಾಸು (ನಿಲ್ಲಿಸು)

**ಇಂಗ್ಲಿಷು :** ಮಿಲಟರಿ, ಪಿಸ್ತೂಲ, ಗ್ಯಾಂಗು, ಪಿವನ್, ಮೆನೇಜರ, ವಾಚಮನ್, ಹೆಡ್ಡಮಾಸ್ತರ, ಸೋಫಾ, ರಿಕ್ಷಾಬೆಂಚ, ಕಾರ, ಡೆಸ್ಕ, ಬ್ಯಾರಲ್, ಆಫೀಸ್, ಮುನಿಸಿಪಾಲಿಟಿ, ಬಕೇಟ, ಮೆಂಬರ, ಪ್ಯಾನ್, ಇನವರಸಿಟಿ, ಗಿಲಾಸ, ಸ್ಕೂಲ್ (ಇಸ್ಕೂಲ್), ರೇಟ, ಬ್ಯಾಟ, ಕಮೀಟಿ, ಮೀಟಿಂಗ, ಲೈಸನ್ಸ, ಲೋನ, ಲೇವಿ, ಲೀಡರ, ಕಾಫಿ, ಡಾಕ್ಟರ, ಜಜ್, ಸಪ್ಲಾಯ, ಟ್ರಕ್ಕು, ಟೆಂಡರ, ಬುಕ್, ಬ್ಯಾಂಕ್, ಲಾರಿ, ಟೇಬಲ, ಸೀಲ್, ಹೋಟೆಲ್, ಪೆನ್, ಬಸ್ಸು, ಕಿಲೋ, ಸ್ಟೇಶನ್, ಗೇಟ, ಡಜನ್, ಡೈರಿ, ಪೈಪು, ಪ್ಯಾಂಟು, ಸೀಟು, ನಂಬರ, ರೈಟ, ಡ್ರೆಸ್ಸು, ಕ್ವಿಂಟಾಲ್, ಫೋನ್, ಸ್ಕೂಟರ, ರೇಡಿಯೋ, ಬೋರ್ಡು, ಜಾಕೀಟು, ಟಿ.ವಿ., ಬಾಟ್ಲಿ, ಬನೀನು, ಟಾಕೀಜು, ಸಿಗರೇಟು, ರೂಮು, ಪೋಸ್ಟ, ಸಿನೆಮಾ, ಮಿನಿಸ್ಟರ್ - ಹೀಗೆ ಬೇರೆ ಬೇರೆ ಭಾಷೆಗಳ ಶಬ್ದಗಳು ಇಲ್ಲಿನ ಭಾಷೆಯಲ್ಲಿ ಬೆರೆತು ಹೋಗಿವೆ. ದೈನಂದಿನ ಮಾತುಕತೆಯಲ್ಲಿ ಇಂಥ ಶಬ್ದಗಳು ಸಹಜವಾಗಿ ಇಲ್ಲಿ ಬಳಕೆಗೊಳ್ಳುತ್ತಿವೆ. ಭಾಷೆಯಲ್ಲಿ ಮಡಿವಂತಿಕೆ ಸಲ್ಲದು ಎಂಬುದಕ್ಕೆ ಕಲಬುರ್ಗಿ ನಾಡಿನ ಕನ್ನಡ ಭಾಷೆಯೇ ಸಾಕ್ಷಿಯಾಗಿದೆ. ■

ಗ್ರಂಥಋಣ


೧. ಭಾಷಾಋಣ — ಡಾ|| ಸಂಗಮೇಶ ಸವದತ್ತಿಮಠ

೨. ಕಲಬುರ್ಗಿ ಕನ್ನಡ — ಡಾ|| ಸಂಗಮೇಶ ಸವದತ್ತಿಮಠ

೩. ಸುವರ್ಣ ಸಂಚಯ — ಪ್ರಕಟಣೆ : ಮೈಸೂರು ವಿಶ್ವವಿದ್ಯಾಲಯ, ಮೈಸೂರು

೪. ಐತಿಹಾಸಿಕ ಭಾಷಾವಿಜ್ಞಾನ — ಡಾ|| ಜೆ.ಎಸ್. ಕುಳ್ಳಿ

೫. ಭಾಷೆ — ಡಾ|| ಜೆ.ಎಸ್. ಕುಳ್ಳಿ

೬. An Outline of Linguistic Analysis — Bloch and Treger

೭. ಕಲಬುರ್ಗಿ ಕನ್ನಡ : ವರ್ಣನಾತ್ಮಕ ವ್ಯಾಕರಣ (ಅಪ್ರಕಟಿತ ಪಿ.ಎಚ್.ಡಿ. ಮಹಾಪ್ರಬಂಧ) — ಡಾ|| ನಾಗೇಂದ್ರ ಮಸೂತಿ

# ಎನ್. ಅನಂತರಂಗಾಚಾರ್ ಅವರ ಕನ್ನಡ ಗ್ರಂಥಸಂಪಾದನೆ*

- ಡಾ|| ಎಸ್. ಎಸ್. ಅಂಗಡಿ

ಪ್ರಾಚೀನ ಕೃತಿಗಳ ಸಂಪಾದನೆಯು ವ್ಯವಸ್ಥಿತ ಶ್ರಮ, ವಿದ್ವತ್ತು ಮತ್ತು ವಿಚಕ್ಷಣ ಶಕ್ತಿಗಳನ್ನು ನಿರೀಕ್ಷಿಸುವ ಅಧ್ಯಯನ ಕ್ಷೇತ್ರವಾಗಿದೆ. ಪಾಠ ಪರಿಷ್ಕರಣದ ಮೂಲಕ ಕವಿ ಕೃತಿಯ ಪಾಠವನ್ನು ಅಥವಾ ಒಪ್ಪಿತ ಪಾಠವನ್ನು ನಿಷ್ಕರ್ಷಿಸುವುದಕ್ಕೆ ಸ್ಥೂಲವಾಗಿ ಗ್ರಂಥಸಂಪಾದನೆ ಎಂದು ಕರೆಯುವರು. ಅಧ್ಯಯನಕಾರನು ನಿಷ್ಕೃಷ್ಟವಾದ ಪಾಠದ ಆಧಾರದ ಮೇಲೆ ತನ್ನ ಅಧ್ಯಯನದ ಫಲಿತಗಳನ್ನು ನಿಖರವಾಗಿ ನೆರವೇರಿಸಬಹುದು. ಗ್ರಂಥಸಂಪಾದನೆಯಲ್ಲಿ ಹಸ್ತಪ್ರತಿ ಸಂಗ್ರಹ ಮೊದಲನೆಯ ಹಂತವಾದರೆ ಪಾಠಪರಿಷ್ಕರಣವು ಎರಡನೆಯ ಹಂತವಾಗಿದೆ. ಮೊದಲನೆಯ ಹಂತವು ಅಧ್ಯಯನಕಾರನ ಜನಸಂಪರ್ಕ ಮತ್ತು ಉಪಾಯದ ತಿಳಿವಳಿಕೆಯನ್ನೂ ಎರಡನೆಯ ಹಂತವು ಪಾಂಡಿತ್ಯ ಮತ್ತು ಬಹುಶಿಸ್ತಿನ ಜ್ಞಾನವನ್ನೂ ನಿರೀಕ್ಷಿಸುವಂತಹುದು. ಕೆಲವು ವಿದ್ವಾಂಸರು ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಂಪಾದನೆಯ ಕಾರ್ಯಕ್ಕೆ ತೊಡಗುವರು. ಇನ್ನೂ ಕೆಲವು ವಿದ್ವಾಂಸರು ಸಂಪಾದನೆಯ ಪಾಠ ಮತ್ತು ಪಾಠಾಂತರಗಳನ್ನು ಗಮನದಲ್ಲಿಟ್ಟುಕೊಂಡು ಒಪ್ಪಿತ ಪಾಠಶೋಧಕ್ಕೆ ಒತ್ತು ಕೊಡುವರು. ಎನ್. ಅನಂತರಂಗಾಚಾರ್ ಅವರು ಆ ಎರಡು ಹಂತಗಳಲ್ಲಿ ಗಣನೀಯ ಕೆಲಸ ಮಾಡಿದ ಶ್ರೇಷ್ಠ ಗ್ರಂಥಸಂಪಾದಕರಾಗಿದ್ದಾರೆ.

ಕನ್ನಡ ಪಾಂಡಿತ್ಯಲೋಕಕ್ಕೆ ಎನ್. ಅನಂತರಂಗಾಚಾರ್ ಅವರದು ಚಿರಪರಿಚಿತ ಹೆಸರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ತರಗತಿಯನ್ನು ಪ್ರಾರಂಭ ಮಾಡಿಸುವುದಕ್ಕೆ ವಿಶೇಷ ಶ್ರಮಪಟ್ಟ ಅದರ ಮೊದಲ ತಂಡದ ವಿದ್ಯಾರ್ಥಿಗಳಲ್ಲಿ ಅವರು ಒಬ್ಬರು. ಶ್ರೀಯುತರು ೧೯೩೦ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿ, ಮುಂದೆ ೧೦ ವರ್ಷಗಳ ಕಾಲ ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದಲ್ಲಿ ಸಂಶೋಧನೆ ಮತ್ತು ಗ್ರಂಥ ಸಂಪಾದನೆಯಲ್ಲಿ ತೊಡಗಿ, ನಂತರ ಮೈಸೂರು ವಿಶ್ವವಿದ್ಯಾಲಯದ ವಿವಿಧ ಮಹಾವಿದ್ಯಾಲಯಗಳಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಶ್ರೀಯುತರು ಅನೇಕ ಪ್ರಾಚೀನ ಗ್ರಂಥಗಳ ಸಂಪಾದನೆ ಮತ್ತು ಸಂಶೋಧನೆಗಳಿಂದ ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯವಾದ ಸ್ಥಾನವನ್ನು ಗಳಿಸಿದ್ದಾರೆ.

ಅನಂತರಂಗಾಚಾರ್ ಅವರು ಸಂಪಾದಿಸಿದ ಗ್ರಂಥಗಳಲ್ಲಿ ಪ್ರಾಚೀನ ಕಾವ್ಯಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಅವುಗಳ ಪರಿಷ್ಕರಣದಲ್ಲಿ ಕಾಣುವ ಅವರ ಪಾಂಡಿತ್ಯವು ಎಂತಹವರನ್ನೂ ಬೆರಗುಗೊಳಿಸುವಂತಹುದು. ಅವರು ಸಂಪಾದಿಸಿದ ಆವೃತ್ತಿಗಳು ಆಯಾ ಕವಿಯ ಮೂಲ ಪಾಠಕ್ಕೆ ಹತ್ತಿರವಾದ ಸ್ವರೂಪವನ್ನು ಪಡೆದುಕೊಂಡಿವೆ ಎಂಬುದು ಗಮನಿಸಬೇಕಾದ ಸಂಗತಿ. ಕುಮಾರವ್ಯಾಸನ 'ದ್ರೋಣಪರ್ವ', 'ಕರ್ಣಪರ್ವ', 'ಶಲ್ಯ ಗದಾಪರ್ವ'ಗಳು ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವಂ', ಮಲ್ಲಕವಿಯ 'ಕಾವ್ಯಸಾರಂ', ದುರ್ಗಸಿಂಹನ 'ಕರ್ಣಾಟಕ ಪಂಚತಂತ್ರಂ', ನಾಗವರ್ಮನ 'ಕರ್ಣಾಟಕ ಕಾದಂಬರಿ', ನಂಜುಂಡ ಕವಿಯ 'ಕುಮಾರ ರಾಮಸಾಂಗತ್ಯ ಸಂಗ್ರಹ' ಹಾಗೂ ರುದ್ರಭಟ್ಟನ 'ಜಗನ್ನಾಥವಿಜಯ ಸಂಗ್ರಹ' ಈ ಎಲ್ಲ ಗ್ರಂಥಗಳನ್ನೂ ಅತ್ಯಂತ ಪರಿಶ್ರಮದಿಂದ ಸಂಪಾದಿಸಿದ್ದಾರೆ. ಇವುಗಳ ಪರಿಷ್ಕರಣ ರೀತಿಯನ್ನು ಪರಿಶೀಲಿಸಿದರೆ ಅನಂತರಂಗಾಚಾರ್ಯರ ಗ್ರಂಥಸಂಪಾದನೆಯ ಸ್ಥೂಲ ಪರಿಚಯವಾಗುವುದು.

---

*ಶತಮಾನೋತ್ಸವ ಸ್ಮರಣೆಯ ವಿಶೇಷ ಲೇಖನ

೨

ಈ ಭಾಗದಲ್ಲಿ ಅನಂತರಂಗಾಚಾರ್ಯರ ಕೃತಿ ಸಂಪಾದನೆಯ ವಿಧಾನವನ್ನು ಸ್ಥೂಲವಾಗಿಯಾದರೂ ಪ್ರತ್ಯೇಕವಾಗಿ ನೋಡಬಹುದು. ಮೈಸೂರು ವಿಶ್ವವಿದ್ಯಾಲಯದ ಓರಿಯಂಟಲ್ ಲೈಬ್ರರಿಯು ಕುಮಾರವ್ಯಾಸ ಭಾರತದ ಪರ್ವಗಳ ಸಂಸ್ಕರಣ ಯೋಜನೆಯನ್ನು ಹಾಕಿಕೊಂಡಿತು. ೧೯೧೨ ರಿಂದ ೨೨ರ ವರೆಗೆ ಆದಿಪಂಚಕ ಪರ್ವಗಳ ವಿವಿಧ ವಿದ್ವಾಂಸರಿಂದ ಸಂಪಾದಿಸಲ್ಪಟ್ಟವು. ೧೯೩೧ ರಿಂದ ಯುದ್ಧಪಂಚಕ ಪರ್ವಗಳ ಸಂಸ್ಕರಣ ಕಾರ್ಯ ಆರಂಭವಾಯಿತು. ಎನ್. ಅನಂತರಂಗಾಚಾರ್ಯರು ಯುದ್ಧಪಂಚಕದ ದ್ರೋಣಪರ್ವ, (ಪ್ರ.ಮು. ೧೯೩೬, ನಾಲ್ಕನೆಯ ಮು. ೧೯೭೧) ಕರ್ಣಪರ್ವ (ಪ್ರ.ಮು. ೧೯೪೦, ನಾಲ್ಕನೆಯ ಮು. ೧೯೭೦) ಶಲ್ಯ ಮತ್ತು ಗದಾಪರ್ವಗಳನ್ನು (ಪ್ರ.ಮು. ೧೯೪೨, ಮೂರನೆ ಮು. ೧೯೭೦) ಸಂಪಾದಿಸಿದರು)

**ದ್ರೋಣಪರ್ವ** ಎಂಬುದು ೧೯ ಸಂಧಿಗಳ ಪರ್ವವಾಗಿದೆ. ಸಂಪಾದಕರು ಮೈಸೂರು ಪ್ರಾಚ್ಯಕೋಶಾಗಾರದಲ್ಲಿಯ ೯ ಹಸ್ತಪ್ರತಿಗಳಿಂದ ಈ ಕೃತಿಯನ್ನು ಸಂಪಾದಿಸಿದ್ದಾರೆ. ವಿಶ್ವಾರ್ಹವಾದ 'ಕ' ಪ್ರತಿಯನ್ನು ಆಧಾರವಾಗಿಟ್ಟುಕೊಂಡು ಪರಿಷ್ಕರಿಸಿದ್ದಾರೆ. ಗ್ರಂಥಪಾತಗಳಿದ್ದರೆ ಮಿಕ್ಕ ಹಸ್ತಪ್ರತಿಗಳಿಂದ ತುಂಬಿದ್ದಾರೆ. ಕೆಲವು ಪ್ರತಿಗಳಲ್ಲಿ ಮಾತ್ರ ದೊರೆಯುವ ಪದ್ಯಗಳಲ್ಲಿ ಸೂಕ್ತವಾಗಿ ಕಂಡುಬಂದುವುಗಳನ್ನು, ಒಂದೆರಡು ಪದ್ಯಗಳಾಗಿದ್ದರೆ ಪುಟದಡಿಯಲ್ಲಿ ಅನೇಕ ಪದ್ಯಗಳಾಗಿದ್ದರೆ ಕೊನೆಯಲ್ಲಿ ಪರಿಶಿಷ್ಟವಾಗಿ ಕೊಟ್ಟಿದ್ದಾರೆ. ಈ ಪರ್ವವನ್ನು ಶೋಧಿಸುವುದಕ್ಕೆ ಉಪಯೋಗಿಸಿಕೊಂಡಿರುವ ಎಲ್ಲ ಮಾತೃಕೆಗಳಲ್ಲಿ ಇರುವ ಮೂಲಗ್ರಂಥಕ್ಕೆ ಸೇರಿಸಲಾರದೆಂದು ತೋರಿಬಂದಿರುವ ಪದ್ಯಗಳನ್ನು ಸಹಿತ ಪರಿಶಿಷ್ಟದ ಭಾಗವಾಗಿ ಕೊಡಲಾಗಿದೆ. **ಕರ್ಣಪರ್ವ** ಎಂಬುದು ೨೭ ಸಂಧಿಗಳ ಪರ್ವವಾಗಿದೆ. ಮದ್ರಾಸ್ ಪ್ರಾಚ್ಯಕೋಶಾಗಾರದಲ್ಲಿ ದೊರೆತ ಪ್ರತಿಗಳು ಹಾಗೂ ಆರ್. ರಾಮಾನುಜ ಚಕ್ರವರ್ತಿಗಳು, ಆರ್. ರಾಮರಾಯರು ಹಾಗೂ ಡಿ.ಎಲ್. ನರಸಿಂಹಾಚಾರ್ ಅವರಿಂದ ದೊರೆತ ಹಸ್ತಪ್ರತಿಗಳನ್ನು ಅನುಲಕ್ಷಿಸಿ ಈ ಪರ್ವವನ್ನು ಪರಿಷ್ಕರಿಸಿದ್ದಾರೆ. ಹಿಂದಿನ ಪರ್ವದಂತೆ ಈ ಪರ್ವವನ್ನು ಶೋಧನೆ ಮಾಡುವಾಗ ಎಲ್ಲ ಪ್ರತಿಗಳಲ್ಲಿಯೂ ದೊರೆಯುವ ಪದ್ಯಗಳಲ್ಲಿ ಸೂಕ್ತವಾಗಿ ಕಂಡುಬಂದುವುಗಳನ್ನು ಒಂದೆರಡು ಪದ್ಯಗಳಾಗಿದ್ದರೆ ಪುಟದಡಿಯಲ್ಲಿಯೂ ಅನೇಕ ಪದ್ಯಗಳಾಗಿದ್ದರೆ ಕೊನೆಯಲ್ಲಿಯೂ ಕೊಟ್ಟಿದ್ದಾರೆ. **ಶಲ್ಯಗದಾಪರ್ವ** ಶಲ್ಯ ಪರ್ವವು ೩ ಸಂಧಿಗಳನ್ನು, ಗದಾಪರ್ವವು ೧೩ ಸಂಧಿಗಳನ್ನೊಳಗೊಂಡಿವೆ. ಪ್ರಾಚ್ಯಕೋಶಾಗಾರದಲ್ಲಿ ಲಭಿಸಿದ ಹತ್ತು ಓಲೆ ಪ್ರತಿಗಳನ್ನಾಧರಿಸಿ ಈ ಪರ್ವವನ್ನು ಸಂಪಾದಿಸಿದ್ದಾರೆ. 'ಕ' ಪ್ರತಿಯ ಪಾಠವು ವಿಶ್ವಾಸಾರ್ಹವಾಗಿರುವುದರಿಂದ ಅದನ್ನೇ ಮುಖ್ಯವಾಗಿಟ್ಟುಕೊಂಡು ಮಿಕ್ಕವುಗಳನ್ನು ಪಾಠದೋಷದ ಸಂದರ್ಭದಲ್ಲಿ ಬಳಸಿಕೊಂಡಿದ್ದಾರೆ. ಆದರೆ ಈ ಮೂರು ಪರ್ವಗಳ ಸಂಪಾದನೆಯಲ್ಲಿ ಸಂಪಾದಕರಿಗೆ ದೊರೆತ ಹಸ್ತಪ್ರತಿಗಳ ಸ್ವರೂಪ, ಸ್ಥಿತಿ, ಕಥಾಸಾರಾಂಶ ಇವುಗಳನ್ನು ಕುರಿತು ಅಭ್ಯಾಸಪೂರ್ಣ ಪ್ರಸ್ತಾವನೆಯಿಲ್ಲದಿರುವುದು ವ್ಯಸನದ ಸಂಗತಿಯಾಗಿದೆ.

ಅನಂತರಂಗಾಚಾರ್ಯರ ನಿಜವಾದ ಗ್ರಂಥಸಂಪಾದನೆಯ ಶಕ್ತಿ ಬೆಳಕಿಗೆ ಬಂದುದು ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವಂ' (ಪ್ರ.ಮು. ೧೯೪೨, ದ್ವಿ.ಮು. ೧೯೭೨) ಮತ್ತು ಮಲ್ಲಕವಿಯ ಕಾವ್ಯಸಾರಂ (೧೯೭೬) ಎಂಬ ಗ್ರಂಥಗಳನ್ನು ಪ್ರಕಟಿಸಿದಾಗ. ಈ ಎರಡು

ಗ್ರಂಥಗಳು ಕನ್ನಡದ ಉದ್ದಾಮ ಸಂಕಲನ ಗ್ರಂಥಗಳು. ಇಲ್ಲಿನ ಸಂಪಾದನೆಯ ಕಾರ್ಯ ಉತ್ತಮ ಮಟ್ಟದ್ದಾಗಿದೆ. ಆಧುನಿಕ ಗ್ರಂಥಸಂಪಾದನೆಯ ತತ್ತ್ವಗಳೆಲ್ಲ ಇಲ್ಲಿ ಬಹುಶಾಸ್ತ್ರೀಯವಾಗಿ ಉಪಯುಕ್ತವಾಗಿವೆ. ಇವುಗಳ ಸಂಪಾದನೆಯ ಕಾರ್ಯದಲ್ಲಿ ಸಂಪಾದಕರು ಉಪಲಬ್ಧವಾದ ಎಲ್ಲ ಹಸ್ತಪ್ರತಿಗಳನ್ನೂ ಉಪಯೋಗಿಸಿಕೊಂಡಿದ್ದಾರೆ.

ಮಲ್ಲಿಕಾರ್ಜುನನ (ಸು. ೧೨೪೫) **ಸೂಕ್ತಿಸುಧಾರ್ಣವಂ:** ಇದೊಂದು ಸಂಕಲನ ಗ್ರಂಥ. ಇದರಲ್ಲಿ ಪ್ರಾಚೀನ ಕವಿ ಕಾವ್ಯಗಳ ಸ್ವಾರಸ್ಯಕರವಾದ ಪದ್ಯಗಳನ್ನು ಒಂದೆಡೆ ಕಲೆ ಹಾಕಲಾಗಿದೆ. ಕೃತಿಯ ಮೊದಲಲ್ಲಿರುವ ಮುನ್ನುಡಿ ಮತ್ತು ಪ್ರಸ್ತಾವನೆಯ ಭಾಗದಲ್ಲಿ ಮಲ್ಲಿಕಾರ್ಜುನನ ಕಾಲ, ದೇಶ ಮತ್ತು ವಿಚಾರಗಳನ್ನು ಚರ್ಚಿಸಿದ್ದಾರೆ. ಮಲ್ಲಿಕಾರ್ಜುನನು ಅಜೈನನೆಂದು ಸಕಾರಣವಾಗಿಯೇ ಹೇಳಿದ್ದಾರೆ. ತಾವು ಬಳಸಿಕೊಂಡಿರುವ ಹಸ್ತಪ್ರತಿಗಳ ವಿವರ ಹಾಗೂ ತಾವು ಅನುಸರಿಸಿರುವ ಗ್ರಂಥಸಂಪಾದನೆಯ ವಿಧಾನವನ್ನು ಕುರಿತು ವಿಶದವಾಗಿ ವಿವರಿಸಿದ್ದಾರೆ. ಇದರಲ್ಲಿ ಒಟ್ಟು ಪೀಠಿಕಾ ಪ್ರಕರಣವೂ ಸೇರಿ ಹತ್ತೊಂಬತ್ತು ಆಶ್ವಾಸನಗಳಿವೆ. ಕಾವ್ಯಾಂಗಗಳಾದ ಅಷ್ಟಾದಶವರ್ಣನೆಗಳನ್ನು ಕ್ರಮಬದ್ಧವಾಗಿ ಬೇರೆ ಬೇರೆ ಅಶ್ವಾಸಗಳಾಗಿ ವಿಭಾಗಿಸಿಕೊಂಡು ಮಹಾಕಾವ್ಯದ ಮಾದರಿಯಲ್ಲಿ ರಚಿಸಲಾಗಿದೆ. ಆದುದರಿಂದ ಈ ಯೋಜನೆಯ ರೀತಿ, ಕ್ರಮ ಎಲ್ಲವೂ ಮಲ್ಲಿಕಾರ್ಜುನನದೇ ಆಗಿದೆ.

ಹತ್ತೊಂಬತ್ತು ಪ್ರಕರಣಗಳಿರುವ ಈ ಕೃತಿ ಸಂಪಾದನೆಗೆ ಐದು ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ. ಸಂಪಾದಕರಲ್ಲಿದ್ದ ಕಾಗದ ಪ್ರತಿಯುನ್ನು ಮುಖ್ಯ ಪಾಠವನ್ನಾಗಿಟ್ಟುಕೊಳ್ಳಲಾಗಿದೆ. ಇದರಲ್ಲಿ ಱ ಕಾರವು ಶುದ್ಧವಾಗಿ ಉಪಯೋಗವಾಗಿರುವುದರಿಂದ ಇದರ ಮೂಲ ಮಾತೃಕೆ ಪ್ರಾಚೀನವಾದುದಾಗಿರಬೇಕೆಂದು ಸಹಜವಾಗಿ ಊಹಿಸಬಹುದು ಹಾಗೂ ಇದರ ಪಾಠವು ಬಹುಮಟ್ಟಿಗೆ ಶುದ್ಧವಾಗಿದೆ. ಇದನ್ನು 'ಕ' ಎಂಬ ಸಂಕೇತದಿಂದ ಗುರುತಿಸಿದ್ದಾರೆ. ಪ್ರಾಚ್ಯಕೋಶಾಗಾರದಲ್ಲಿರುವ ಹಾಗೂ ಸಂಪಾದಕರಿಗೆ ಬೇಲೂರು ಪ್ರದೇಶದಲ್ಲಿ ಸಿಕ್ಕ ಓಲೆ ಪ್ರತಿಯ ಪಾಠವೂ ಶುದ್ಧವಾಗಿದೆ. ಇದರಲ್ಲಿಯ ೧೮ನೆಯ ಆಶ್ವಾಸವು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟಿವೆ. ಇದನ್ನು 'ಗ' ಎಂಬ ಸಂಕೇತದಿಂದ ಗುರುತಿಸಿದ್ದಾರೆ. 'ಕ' ಪ್ರತಿಯಲ್ಲಿ ಲಿಪಿಕಾರನ ದೋಷಗಳಿಂದ ಗ್ರಂಥಪಾತಗಳಾಗಿದ್ದರೆ 'ಗ' ಪ್ರತಿಯನ್ನಾಧರಿಸಿ ಪಾಠ ಶುದ್ಧ ಮಾಡಲಾಗಿದೆ. ಶೃಂಗೇರಿ ಶಂಕರ ಮಠದ ಓಲೆಯ ಪ್ರತಿ, ಬೇಲೂರಿನ ಜೋಡಿದಾರ್ ನಾರಾಯಣ ಭಟ್‌ರಿಂದ ದೊರೆತ ಓಲೆ ಪ್ರತಿಗಳು ಅಪೂರ್ಣವಾಗಿರುವುದರಿಂದ ಸಂದೇಹ ಬಂದೆಡೆಗಳಲ್ಲಿ ಅವುಗಳನ್ನು ಬಳಸಿಕೊಳ್ಳಲಾಗಿದೆ. ಕೃತಿಯು ಉದ್ದಕ್ಕೂ ಶೋಧಿತವೂ, ಸಂಪಾದಿತವೂ ಆದ ಶುದ್ಧ ಪಾಠವನ್ನು ಕೊಟ್ಟಿದೆ. ಸಂಪಾದಿತ ಪಠ್ಯದ ಕೆಳಗೆ ಮಿಕ್ಕ ಪ್ರತಿಗಳ ಪಾಠಾಂತರಗಳನ್ನು ಕೊಡಲಾಗಿದೆ. ಈ ಎಲ್ಲ ಸಾಮಾಗ್ರಿಗಳನ್ನು ಉಪಯೋಗಿಸಿಕೊಂಡು ವಿಶೇಷ ಶ್ರಮ ಪಟ್ಟರೂ ಅರ್ಥವಾಗದ ಸುಮಾರು ೫೦ ಪದ್ಯಗಳಿಗೆ ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕಿದ್ದಾರೆ. ಇದು ಸಂಪಾದಕರ ವಿದ್ವತ್ತಿನ ಪ್ರಾಮಾಣಿಕತನದ ದ್ಯೋತಕವಾಗಿದೆ. ಮಾತೃಕೆಗಳಿಲ್ಲದ ಸಂಪಾದಕರ ವಿದ್ವತ್ತಿನ ಹೊಸಪಾಠಗಳನ್ನು ಕಂಸದಲ್ಲಿ ಸೇರಿಸಲಾಗಿದೆ. ಈ ಕೃತಿಯ ಪರಿಷ್ಕರಣವು ಬಹು ಎಚ್ಚರಿಕೆಯಿಂದ ನಡೆದಿದೆ. ಇತರ ಸುಭಾಷಿತ ಗ್ರಂಥಗಳಂತೆ ಇದರಲ್ಲಿರುವ ಪದ್ಯಗಳಿಗೆ ಮಾತೃಕೆಗಳಲ್ಲಿ ಆಕರಗಳು ಸೂಚಿತವಾಗಿಲ್ಲವಾದುದರಿಂದ ಅದನ್ನು ಶೋಧಿಸಲಿಕ್ಕೆ ಸಂಪಾದಕರು ತುಂಬ ಕಷ್ಟಪಟ್ಟಿದ್ದಾರೆ. ಅದಕ್ಕಾಗಿ ಮಲ್ಲಿಕಾರ್ಜುನನಿಗಿಂತ ಹಿಂದೆ ಇದ್ದ, ಉಪಲಬ್ಧವಾದ ಕನ್ನಡ

ಚಂಪೂ ಗ್ರಂಥಗಳಿಗೂ (ಪ್ರಕಟವಾಗಿರಲಿ ಅಥವಾ ಹಸ್ತಪ್ರತಿಯಲ್ಲಿರಲಿ) ಅಕಾರಾದಿಯನ್ನು ಮಾಡಿಕೊಂಡು ಸೂಕ್ತಿಸುಧಾರ್ಣವದ ಅಕಾರಾದಿಯೊಂದಿಗೆ ಹೋಲಿಸಿ ಶಾಸ್ತ್ರೀಯವಾಗಿ ಸಾಧ್ಯವಾದಷ್ಟು ಪದ್ಯಗಳಿಗೆ ಆಕರಗಳನ್ನು ಕಂಡುಹಿಡಿದು ಅವುಗಳಡಿಯಲ್ಲಿ ಕೊಟ್ಟಿದೆ. ಪರಿಷ್ಕರಣೆಯಲ್ಲಿ ಮೇಲೆ ಸೂಚಿಸಿದ ಹಸ್ತಪ್ರತಿಗಳನ್ನು ಆಕರಸಿಕ್ಕಿರುವ ಪದ್ಯಗಳಿಗೆ ಇವುಗಳ ಜೊತೆಗೆ ಆಯಾಗ್ರಂಥಗಳ ಅಚ್ಚಿನ ಅಥವಾ ಹಸ್ತಪ್ರತಿಗಳ ಗ್ರಂಥಗಳನ್ನೂ ಉಪಯೋಗಿಸಿಕೊಂಡಿದ್ದಾರೆ. ಅಚ್ಚಿನ ಪ್ರತಿಗಳಿಂದ ಪಾಠಾಂತರವನ್ನು ಕೊಟ್ಟಿದ್ದರೆ ಅದಕ್ಕೆ (ಅ) ಸಂಕೇತವನ್ನು ಉಪಯೋಗಿಸಲಾಗಿದೆ.

ಗ್ರಂಥಾಂತ್ಯದಲ್ಲಿ ನಾಲ್ಕು ಅನುಬಂಧಗಳಿವೆ. ಮೊದಲನೆಯದು ಸೂಕ್ತಿಸುಧಾರ್ಣವದ ಪದ್ಯಗಳ ಅಕಾರಾದಿ, ಎರಡನೆಯದು ಆಕರಗಳು ಗೊತ್ತಾಗಿರುವ ಸೂಕ್ತಿಸುಧಾರ್ಣವದ ಪದ್ಯಗಳ ಸೂಚಿ, ಮೂರನೆಯದು ಪ್ರಸ್ತುತ ಪರಿಷ್ಕರಣದಲ್ಲಿ ಉಪಯೋಗಿಸಿದ ಆಕರಗಳ ಪಟ್ಟಿ, ನಾಲ್ಕನೆಯದು ಪರಿಷ್ಕರಣದಲ್ಲಿ ಉಪಯೋಗಿಸಿಕೊಂಡಿರುವ ಅಚ್ಚಿನ ಪ್ರತಿಗಳು ಈ ವಿವರಗಳನ್ನೊಳಗೊಂಡಿವೆ. ಈ ಕಾವ್ಯದಲ್ಲಿ ೨,೨೦೦ ಪದ್ಯಗಳಿವೆ. ಅವುಗಳಲ್ಲಿ ಅರ್ಧಕ್ಕೆ ಮಾತ್ರ ಆಕರಗಳು ಲಭ್ಯವಾಗಿವೆ. ಉಳಿದವಕ್ಕೆ ಆಕರಗಳನ್ನು ಗೊತ್ತುಮಾಡಲು ಸಾಧ್ಯವಾಗಿಲ್ಲ. ಇದನ್ನು ಗಮನಿಸಿದರೆ ಈಗ ನಷ್ಟವಾಗಿರುವ ಕನ್ನಡ ಗ್ರಂಥರಾಶಿಯ ಪರಿಮಾಣವೂ ಕನ್ನಡ ಸಾಹಿತ್ಯದ ವಿಸ್ತಾರವೂ ಲಭ್ಯವಾಗುವುದು. ಅಜ್ಞಾತ ಕವಿಕೃತಿಗಳ ಅಧ್ಯಯನಕ್ಕೆ ಪ್ರಸ್ತುತ ಸಂಕಲನವು ಬಹುಮುಖ್ಯ ಆಕರವಾಗುತ್ತದೆ. ಸಂಪಾದಕರು ಕೊಟ್ಟಿರುವ ಅನುಬಂಧಗಳು ಈ ಕ್ಷೇತ್ರದಲ್ಲಿ ಅಧ್ಯಯನ ಮುಂದುವರೆಸುವವರಿಗೆ ಆಕರಗಣೆಗಳಾಗಿ* ನೆರವಾಗುತ್ತವೆ. ಇದನ್ನು ಗಮನಿಸಿದರೆ ಈ ಪರಿಷ್ಕರಣದ ಮಹತ್ವ ತಿಳಿಯುತ್ತದೆ.

ಮಲ್ಲಕವಿಯ (ಸು. ೧೫೬೦) **ಕಾವ್ಯಸಾರಂ :** ಇದು ಸಹಿತ ಸೂಕ್ತಿಸುಧಾರ್ಣವದಂತೆ ಪ್ರಾಚೀನ ಕವಿಕಾವ್ಯಗಳ ಸಂಕಲನ ಕೃತಿ. ಕನ್ನಡ ಸಾಹಿತ್ಯದಲ್ಲಿ ದೊರೆತ ಮೂರನೆಯ ಸಂಕಲನ ಗ್ರಂಥವಿದು. ಹಿಂದಿನವುಗಳಿಗಿಂತ (ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ, ಅಭಿನವವಾದಿ ವಿದ್ಯಾನಂದನ 'ಕಾವ್ಯಸಾರ', ಪ್ರಸ್ತುತ ಸಂಕಲನ ಕೃತಿಯೂ) ಗುಣ ಮತ್ತು ಗಾತ್ರಗಳಲ್ಲಿ ಮೌಲಿಕವಾಗಿವೆ. ಇದರಲ್ಲಿ ಒಟ್ಟು ೧೫ ಪ್ರಕರಣಗಳಿವೆ. ಪೂರ್ವಕಾವ್ಯಸಂಪ್ರದಾಯದ ಅಷ್ಟಾದಶ ವರ್ಣನೆಗಳು ಹದಿನೈದು ಪ್ರಕರಣಗಳಲ್ಲಿ ಅಡಕವಾಗಿದೆ. ಈ ಸಂಕಲನಕೃತಿಯ ಶಿಲ್ಪವೂ ಸೂಕ್ತಿಸುಧಾರ್ಣವದ ಆಧಾರದ ಮೇಲೆಯೇ ರಚಿತವಾಗಿರುವುದು ನಿರ್ವಿವಾದದ ವಿಷಯವಾಗಿದೆ. ಆಶ್ವಾಸಗಳ ವಿಭಾಗಕ್ರಮ, ಆದಿ ಅಂತ್ಯ ಪದ್ಯಗಳು ಹಾಗೂ ಗ್ರಂಥ ಶರೀರದಲ್ಲಿ ಬರುವ ಎಲ್ಲವೂ ಬಹುಮಟ್ಟಿಗೆ ಒಂದೇ ರೀತಿಯಾಗಿವೆ. ಸಂಪಾದಕರು ಪ್ರಸ್ತಾವನೆಯಲ್ಲಿ ತಮಗೆ ದೊರೆತ ಹಸ್ತಪ್ರತಿಗಳ ಸ್ವರೂಪ, ಕೃತಿಯ ಶಿಲ್ಪ, ಸಂಪಾದನೆಯ ಶಿಲ್ಪವನ್ನು ಕುರಿತು ಪ್ರಸ್ತಾವನೆಯಲ್ಲಿ ವಿಶದೀಕರಿಸಿದ್ದಾರೆ.

ಈ ಗ್ರಂಥ ಹಸ್ತಪ್ರತಿಗಳ ನೆರವಿನಿಂದ ಮೊದಲ ಬಾರಿಗೆ ಪ್ರಕಟವಾಗಿ ಕನ್ನಡಿಗರಿಗೆ ದೊರೆಯುವಂತಾಗಿದೆ. ಇದು ಅನಂತರಂಗಾಚಾರ್ಯರ ದೊಡ್ಡ ಸಾಧನೆ. ಈ ಕೃತಿಯನ್ನು ಸಂಪಾದಿಸುವಾಗ ಸಂಪಾದಕರು ತಮ್ಮ ಹಿಂದಿನ ಸಂಕಲನಕೃತಿಯನ್ನೇ

* ಆಕರ ಅಂದರೇನೇ 'ಗಣಿ' ಅಲ್ಲವೇ? - ಸಂ

ವಮಾದರಿಯಾಗಿರಿಸಿಕೊಂಡಿದ್ದಾರೆ. ಗ್ರಂಥವನ್ನು ಸಂಪಾದಿಸಲು ಮೈಸೂರಿನ ಪ್ರಾಚ್ಯಸಂಶೋಧನಾಲಯದ ಎರಡು ಸಂಪುಟಗಳುಳ್ಳ ಕಾಗದಪ್ರತಿ, ಜೋಡಿದಾರ ನಾರಾಯಣ ಭಟ್‌ರಿಂದ ದೊರೆತ ಓಲೆಯ ಪ್ರತಿ ಹಾಗೂ ಸಂಪಾದಕರಲ್ಲಿದ್ದ ಕಾಗದಪ್ರತಿ ಹೀಗೆ ಒಟ್ಟು ಮೂರು ಕೃತಿಗಳನ್ನು ಬಳಸಿದೆ. ಸಂಪಾದಕರಲ್ಲಿದ್ದ ಕಾಗದಪ್ರತಿಯಲ್ಲಿ ಎಲ್ಲ ಹದಿನೈದು ಆಶ್ವಾಸಗಳಿದ್ದು ಪಾಠವು ಸಾಧುವಾಗಿರುವುದರಿಂದ ಪ್ರಸ್ತುತ ಸಂಪಾದನೆಯು ಸಂಪಾದಕರಲ್ಲಿದ್ದ ಹಸ್ತಪ್ರತಿಯ ಪಾಠವನ್ನು ಅವಲಂಬಿಸಿದೆ. ಅಲ್ಲಲ್ಲಿ ಗ್ರಂಥಪಾತಗಳಿದ್ದರೆ ಮಿಕ್ಕ ಪಾಠಗಳ ನೆರವನ್ನು ಪಡೆದುಕೊಳ್ಳಲಾಗಿದೆ. ಕೆಲವು ಅಚ್ಚಿನಪ್ರತಿಗಳ ನೆರವಿನಿಂದ ಪಾಠವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾರೆ. ಆಗ ಆ ಕೃತಿಯ ಸಂಕೇತವನ್ನು ಕೊಟ್ಟಿದ್ದಾರೆ. ಉದಾ : ಸೂಕ್ತಿಸುಧಾರ್ಣವದ ನೆರವಿನಿಂದ ಪಾಠ ತಿದ್ದಿದರೆ (ಸೂ) ಎಂದು ಸಂಕೇತಕೊಟ್ಟಿದ್ದಾರೆ. ಅಲ್ಲಲ್ಲಿ ಅರ್ಥವಾಗದ ಪದ್ಯಗಳಿಗೆ ಪ್ರಶ್ನಾರ್ಥಕ ಚಿಹ್ನೆ ಹಾಕಲಾಗಿದೆ, ಇದು ಸಂಪಾದಕರ ಪ್ರಾಮಾಣಿಕತೆಯ ಕುರುಹು.

ಗ್ರಂಥಾಂತ್ಯದಲ್ಲಿ ವಾಚಕರ ಸೌಕರ್ಯದ ದೃಷ್ಟಿಯಿಂದ ಹನ್ನೆರಡು ಅನುಬಂಧಗಳನ್ನು ಸಿದ್ಧಪಡಿಸಿದ್ದಾರೆ ಕಾವ್ಯಸಾರದ ಪದ್ಯಗಳ ಅಕಾರಾದಿಸೂಚಿ, ಕಾವ್ಯಸಾರದಲ್ಲಿ ಆಕರಗಳು ಸಿಕ್ಕದಿರುವ ಪದ್ಯಗಳ ಅಕಾರಾದಿ, ಕಾವ್ಯಸಾರದಲ್ಲಿ ಆಕರಗಳ ಪಟ್ಟಿ, ಈ ಸಂಪಾದನೆಯಲ್ಲಿ ಉಪಯೋಗಿಸಿರುವ ಅಚ್ಚಿನ ಪುಸ್ತಕಗಳು, ಸೂಕ್ತಿಸುಧಾರ್ಣವ ಮತ್ತು ಕಾವ್ಯಸಾರಗಳ ತೌಲನಿಕ ಪಟ್ಟಿ, ಈ ಸಂಪಾದನೆಯಲ್ಲಿ ಉಪಯೋಗಿಸಿರುವ ಅಚ್ಚಿನ ಪುಸ್ತಕಗಳು ಸೂಕ್ತಿಸುಧಾರ್ಣವ ಮತ್ತು ಕಾವ್ಯಸಾರಗಳ ತೌಲನಿಕ ಪಟ್ಟಿ, ಕಾವ್ಯಸಾರದಲ್ಲಿ ಅನುವಾದವಾಗದ ಸೂಕ್ತಿಸುಧಾರ್ಣವದ ಆಕರ ಸಿಕ್ಕಿದ ಪದ್ಯಗಳ ಅಕಾರಾದಿ, ಕಾವ್ಯಾವಲೋಕನ, ಭಾಷಾಭೂಷಣ, ಶಬ್ದಮಣಿದರ್ಪಣ ಹಾಗೂ ಕವಿರಾಜಮಾರ್ಗದ ಉದಾಹರಣ ಪದ್ಯಗಳಲ್ಲಿ ಆಕರ ಸಿಕ್ಕಿದ ಪದ್ಯಗಳ ಅಕಾರಾದಿ, ಈ ಕೃತಿಯಲ್ಲಿ ಉಕ್ತವಾದ ೩,೬೦೦ ಪದ್ಯಗಳಲ್ಲಿ ಎಷ್ಟೋ ಪದ್ಯಗಳ ಆಕರಗಳು ದೊರೆಯದಿರುವುದು. ಇದನ್ನು ಗಮನಿಸಿದರೆ ಕನ್ನಡದಲ್ಲಿ ಎಷ್ಟೋ ಹಳೆಯ ಗ್ರಂಥಗಳು ಕಣ್ಮರೆಯಾಗಿವೆ ಎಂಬ ಸಂಗತಿ ಮನವರಿಕೆಯಾಗದಿರದು. ಹಿಂದಣ ಅಜ್ಞಾತವಾಗಿರುವ ಕವಿಕಾವ್ಯಗಳ ಶೋಧನೆಗೆ ಇಂತಹ ಅನುಬಂಧದ ಅಗತ್ಯವಿತ್ತು. ಅದನ್ನು ತುಂಬ ಶ್ರಮವಹಿಸಿ ಅನಂತರಂಗಾಚಾರ್ಯರು ಈ ಪುಸ್ತಕದ ಮೂಲಕ ಒದಗಿಸಿಕೊಟ್ಟಿದ್ದಾರೆ.

ಕನ್ನಡ ಸಾಹಿತ್ಯದ ಅಧ್ಯಯನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಎರಡೂ ಸಂಕಲನ ಗ್ರಂಥಗಳು ತುಂಬ ಪ್ರಯೋಜನಕರವಾಗಿವೆ. ಕೆಲವು ಅಧ್ಯಯನಕಾರರಿಗೆ ಅಥವಾ ಆಸಕ್ತರಿಗೆ ಇಡೀ ಕಾವ್ಯವನ್ನು ಓದಿ ರಸಾನಂದ ಅನುಭವಿಸಲು ಸಾಧ್ಯವಾಗುವುದಿಲ್ಲ. ಪ್ರಾಚೀನ ಕಾವ್ಯಗಳ ರಸವತ್ತಾದ ಹಾಗೂ ಸಾಹಿತ್ಯಿಕವಾಗಿ ಮಹತ್ವ ಪಡೆದ ಭಾಗಗಳನ್ನು ಅಡಕಗೊಳಿಸಿದ ಇಂತಹ ಸಂಕಲನಗಳನ್ನು ಅಧ್ಯಯನ ಮಾಡುವುದರಿಂದ ರಸಾನಂದದ ಜೊತೆಗೆ ಕೆಲವು ಅಜ್ಞಾತ ಕವಿಗಳ ಇತಿವೃತ್ತವನ್ನು ಶೋಧಿಸಲು ಅನುಕೂಲವಾಗುತ್ತದೆ. ಅಲ್ಲದೆ ಉಪಲಬ್ಧವಾದ ಗ್ರಂಥಗಳ ಉತ್ತಮ ಪದ್ಯಗಳನ್ನು ಸೂಕ್ತಿಸುಧಾರ್ಣವ ಮತ್ತು ಕಾವ್ಯಸಾರಗಳು ಉಳಿಸಿಕೊಟ್ಟಿವೆ ಎಂಬುದು ಅಷ್ಟೇ ಸಮಾಧಾನದ ಸಂಗತಿಯಾಗಿದೆ.

ದುರ್ಗಸಿಂಹನ (ಸು. ೧೧೦೦) **ಕರ್ಣಾಟಕ ಪಂಚತಂತ್ರಂ** : ಇದು ನೀತಿಬೋಧಕ ಕಾವ್ಯ. ಇದಕ್ಕೆ ಮೂಲ ಸಂಸ್ಕೃತದ ವಸುಭಾಗಭಟ್ಟನ ಪಂಚತಂತ್ರ. ಇದನ್ನು ಕನ್ನಡದಲ್ಲಿ

'ಪೊಸತಾಗಿರೆ ವಿರಚಿಸುವೆಂ' ಎಂದು ದುರ್ಗಸಿಂಹನು ಹೇಳಿದ್ದಾನೆ. ಇದು ಅನುವಾದ ಕೃತಿಯಾದರೂ ದುರ್ಗಸಿಂಹನ ಸ್ವತಂತ್ರಶೀಲತೆ ಐದೂ ಪ್ರಕರಣಗಳಲ್ಲಿಯೂ ಅಡಗಿದೆ. ಕರ್ಣಾಟಕ ಪಂಚತಂತ್ರವು ಶ್ರೇಷ್ಠ ಕಾವ್ಯ ಅಲ್ಲದಿದ್ದರೂ ಹೊಸಧೋರಣೆಯನ್ನು ಅಭಿವ್ಯಕ್ತಿಸಿದ ಕಾವ್ಯವಾಗಿದೆ. ಪಂಚತಂತ್ರವು ಚಂಪೂವಿನಲ್ಲಿದೆ, ಆದರೂ ಪದ್ಯಗಳಿಗಿಂತ ಗದ್ಯ ಭಾಗವೇ ಹೆಚ್ಚು.

ಈ ಕಾವ್ಯವನ್ನು ೧೮೮೯ ರಲ್ಲಿ ಎಂ. ಎ. ರಾಮಾನುಜ ಅಯ್ಯಂಗಾರ್ ಮತ್ತು ಎಸ್.ಜಿ. ನರಸಿಂಹಾಚಾರ್ ಅವರು ಜೊತೆ ಸೇರಿ ಮೂರು ಹಸ್ತಪ್ರತಿಗಳ ನೆರವಿನಿಂದ ಕರ್ಣಾಟಕ ಕಾವ್ಯಕಲಾನಿಧಿಯ ಮಾಲೆಯಲ್ಲಿ ಪ್ರಕಟಿಸಿದ್ದಾರೆ. ಆ ಸಂಪಾದಕರು ಕೊಟ್ಟಿರುವ ಪಾಠ ಸುಖಕರವಾಗಿಲ್ಲ. ಪದಚ್ಛೇದದೋಷ ಮತ್ತು ಛಂದೋದೋಷಗಳು ಹೇರಳವಾಗಿವೆ.* ಇದರಿಂದ ಕರ್ಣಾಟಕ ಪಂಚತಂತ್ರವನ್ನು ಇನ್ನೊಮ್ಮೆ ಪರಿಷ್ಕರಿಸಿ ಪ್ರಕಟಿಸುವ ಅಗತ್ಯವಿತ್ತು. ಈ ಗುರುತರವಾದ ಕೆಲಸವನ್ನು ಎನ್. ಅನಂತರಂಗಾಚಾರ್ ಅವರು ನೆರವೇರಿಸಿದರು (೧೯೭೩), ಪ್ರಸ್ತುತ ಕೃತಿ ಸಂಪಾದನೆಗೆ ಮುದ್ರಿತ ಪ್ರತಿ (ರಾಮಾನುಜ ಅಯ್ಯಂಗಾರ್ ಮತ್ತು ನರಸಿಂಹಾಚಾರ್‌ರ ಪರಿಷ್ಕರಣ) ಹಾಗೂ ಮೈಸೂರು ಗ್ರಂಥಭಂಡಾರದಲ್ಲಿ ದೊರೆತ ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ.

ಪೀಠಿಕಾ ಪ್ರಕರಣವನ್ನು ಹೊರತುಪಡಿಸಿ ಐದು ಪ್ರಕರಣಗಳ ಈ ಕೃತಿಯ ಸಂಪಾದನೆಯಲ್ಲಿ ಸಂಪಾದಕರು ತಮ್ಮ ಹಿಂದಣ ಕೃತಿಗಳ ಮಾದರಿಯನ್ನೇ ಅನುಸರಿಸಿದ್ದಾರೆ. ಮೊದಲನೆಯ ಮುದ್ರಣಧ ಪಾಠಾಂತರಗಳನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ. ಹಾಗೂ ಮೊದಲನೆಯ ಮುದ್ರಣದ ಕೆಲವು ಪಾಠದೋಷಗಳನ್ನು ಮಿಕ್ಕ ಹಸ್ತಪ್ರತಿಗಳ ಪಾಠಗಳಿಂದ ಹಾಗೂ ತಮ್ಮ ಪಾಂಡಿತ್ಯಬಲದಿಂದ ನಿಷ್ಕರ್ಷಿಸಿ ಒಪ್ಪಿತ ಪಾಠವನ್ನು ಕೊಡಲು ಯತ್ನಿಸಿದ್ದಾರೆ. ಪಾಠಾಂತರಗಳನ್ನು ಅಡಿಯಲ್ಲಿ ಸೂಚಿಸಿದ್ದಾರೆ. ವಿರಳವಾಗಿ ಅಲ್ಲಲ್ಲಿ ಹಸ್ತಪ್ರತಿಗಳಲ್ಲಾದ ಲೋಪ, ಪ್ರಕ್ಷೇಪ, ವ್ಯತ್ಯಾಸ, ಹಾಗೂ ಪದರಚನೆಯಲ್ಲಾದ ಛಂದೋದೋಷಗಳನ್ನು ಗುರುತಿಸಿ ಸರಿಪಡಿಸಿದ್ದಾರೆ. ಪ್ರಸ್ತುತ ಪಾಠವು ಅರ್ಥ ಮತ್ತು ಅಧ್ಯಯನದ ದೃಷ್ಟಿಯಿಂದ ಸುಲಲಿತವಾಗಿದೆ. ಗ್ರಂಥಾರಂಭದಲ್ಲಿ ಅಭ್ಯಾಸಪೂರ್ಣ ಪ್ರಸ್ತಾವನೆಯಿದೆ. ಭಾರತದಲ್ಲಿ ಕಥಾಸಾಹಿತ್ಯ, ಪಂಚತಂತ್ರ ಮತ್ತು ಹಿತೋಪದೇಶ, ಭಾರತದಲ್ಲಿ ಪ್ರಚಾರವಾಗಿರುವ ಪಂಚತಂತ್ರಗಳ ಸ್ವರೂಪ, ಪ್ರಸ್ತುತ ಪಂಚತಂತ್ರದ ಕಥಾಸಾರಾಂಶ ಈ ಎಲ್ಲ ವಿವರಗಳು ತುಂಬ ಉಪಯುಕ್ತವಾಗಿವೆ. ಗ್ರಂಥಾಂತ್ಯದಲ್ಲಿ ಒಟ್ಟು ೧೨ ಅನುಬಂಧಗಳಿವೆ. ದುರ್ಗಸಿಂಹನ ಪಂಚತಂತ್ರದಲ್ಲಿ ದುರ್ಗಸಿಂಹನ ಪಂಚತಂತ್ರದಲ್ಲಿ ಉಕ್ತವಾಗಿರುವ ಕನ್ನಡ ಪದ್ಯಗಳ, ಸಂಸ್ಕೃತ ಶ್ಲೋಕಗಳ, ಸಂಸ್ಕೃತ ಮತ್ತು ಕನ್ನಡ ಸುಭಾಷಿತಗಳ ಅಕಾರಾದಿಯಿದೆ. ಆ ಕಾವ್ಯದಲ್ಲಿ ಉಕ್ತವಾಗಿರುವ ಉಪಮಾನಗಳ ಪಶುಪಕ್ಷಿಗಳ ಹಾಗೂ ಋಷಿಗಳ ಹೆಸರುಗಳನ್ನೂ ಕೊಟ್ಟಿದ್ದಾರೆ. ಕಾವ್ಯದಲ್ಲಿ ಉಕ್ತವಾಗಿರುವ ಕೆಲವು ಶಾಸ್ತ್ರೀಯ ಶಬ್ದಗಳ

---

* ಎಂ.ಎ. ರಾಮಾನುಜ ಅಯ್ಯಂಗಾರ್ ಮತ್ತು ಎಸ್.ಜಿ. ನರಸಿಂಹಾಚಾರ್ ಅವರು ಗ್ರಂಥ ಸಂಪಾದನೆ ಮಾಡುವ ಕಾಲದಲ್ಲಿ (೧೮ನೇ ಶತಮಾನದ ಅಂತ್ಯಭಾಗ) ಗ್ರಂಥ ಸಂಪಾದನೆಯು ಶೈಕ್ಷಣಿಕ ಶಿಸ್ತಿನ ವಿಷಯವಾಗಿರಲಿಲ್ಲ. ಆ ಇಬ್ಬರು ವಿದ್ವಾಂಸರಿಗೆ ಯಾವುದೇ ಮಾದರಿಗಳು ಇರಲಿಲ್ಲ. ಅಂತಹ ಸಂದರ್ಭದಲ್ಲಿ ಆ ಇಬ್ಬರು ವಿದ್ವಾಂಸರ ಜೊತೆ ಸೇರಿ ಆಧುನಿಕ, ಪೂರ್ವ ಕನ್ನಡದ ಅನೇಕ ಕೃತಿಗಳನ್ನು ಸಂಪಾದಿಸಿದರು. ಅವರ ಆವೃತ್ತಿಗಳಿಗೆ ಚಾರಿತ್ರಿಕ ಮಹತ್ವ ಪ್ರಾಪ್ತವಾಗಿದೆ. ಅವರ ಸಂಪಾದನೆಯ ವಿಧಾನ ಇಂದಿನವರಿಗೆ ಹಿಡಿಸದಿದ್ದರೂ ಹಿಂದಿನ ಕೃತಿಗಳ (ಆ ಇಬ್ಬರು ವಿದ್ವಾಂಸರು ಸಂಪಾದಿಸಿದ) ಈಚಿನ ಪರಿಷ್ಕರಣೆಗಳು ಅವರ ಪರಿಷ್ಕರಣಕ್ಕೆ ವಿಶೇಷ ಋಣಿಯಾಗಿರುವುದನ್ನು ನೋಡಿದರೆ ಆ ಇಬ್ಬರು ವಿದ್ವಾಂಸರ ಗ್ರಂಥ ಸಂಪಾದನೆಯ ಮಹತ್ವ ತಿಳಿಯುತ್ತದೆ.

ವಿವರಣೆಯಿದೆ ಹಾಗೂ ಪಂಚತಂತ್ರಾವಲೋಕನಂ ಭಾಗವು ಪಂಚತಂತ್ರದ ಪ್ರತಿಯೊಂದು ಪ್ರಕರಣಗಳ ಶಬ್ದಾರ್ಥಕ್ಕೆ ಸಂಬಂಧಿಸಿದೆ. ಮಾಹಿತಿಭರಿತವಾದ ಈ ಅನುಬಂಧಗಳು ಗ್ರಂಥಾಧ್ಯಯನಕ್ಕೆ ತುಂಬ ನೆರವಾಗುತ್ತವೆ.

ನಾಗವರ್ಮನ (ಸು. ೯೯೦) **ಕರ್ಣಾಟಕ ಕಾದಂಬರಿ** : ಇದು ಬಾಣನ ಸಂಸ್ಕೃತ ಕಾದಂಬರಿಯ ಕನ್ನಡ ಪರಿವರ್ತನ. ಸಂಸ್ಕೃತದಲ್ಲಿನ ಉತ್ತಮ ಸಾಹಿತ್ಯಗ್ರಂಥವೊಂದನ್ನು ಕನ್ನಡಿಸಬೇಕು ಎಂಬ ಉದ್ದೇಶದಿಂದ ನಾಗವರ್ಮನು ಈ ಅನುವಾದವನ್ನು ಮಾಡಿದ್ದಾನೆ. ಈ ದಾರಿಯಲ್ಲಿ ನಮಗೆ ತಿಳಿದ ಮಟ್ಟಿಗೆ ಇವನೇ ಮೊದಲಿಗನು. ಇದು ಅನುವಾದವಾದರೂ ಕಥಾಭಾಗದ ಅನೇಕ ಸನ್ನಿವೇಶಗಳಲ್ಲಿ ನಾಗವರ್ಮನ ಪ್ರತಿಭೆ ಅಭಿವ್ಯಕ್ತವಾಗಿದೆ. ಕರ್ಣಾಟಕ ಕಾದಂಬರಿಯನ್ನು ಕಳೆದ ಶತಮಾನದ ಅಂತ್ಯದಲ್ಲಿ ಬಿ. ಮಲ್ಲಪ್ಪ ಅವರು ಮೊದಲ ಬಾರಿಗೆ ಸಂಪಾದಿಸಿ ಪ್ರಕಟಿಸಿದರು. ಈ ಕೃತಿಯ ಶುದ್ಧ ಪಾಠವನ್ನು ಗೊತ್ತುಮಾಡಲು ಅವಶ್ಯಕವಾದ ಹಸ್ತಪ್ರತಿಗಳು ದೊರೆಯದಿರುವುದರಿಂದ ಮಲ್ಲಪ್ಪನವರ ಪಾಠವನ್ನು ಅನುಸರಿಸಿ ಅಲ್ಪಸ್ವಲ್ಪ ತಿದ್ದುಪಡಿ ಮಾಡುವುದರ ಮೂಲಕ ಟಿ.ಎಸ್. ವೆಂಕಣ್ಣಯ್ಯನವರು 'ಕರ್ಣಾಟಕ ಕಾದಂಬರೀ ಸಂಗ್ರಹ' ಎಂಬ ಸಂಗ್ರಹ ಆವೃತ್ತಿಯನ್ನು ಪ್ರಕಟಿಸಿದರು (೧೯೩೩).

ಇದಾದ ನಂತರ ಮೂರನೆಯ ಶಾಸ್ತ್ರೀಯ ಸಂಪಾದನೆ ಅನಂತರಂಗಾಚಾರ್ ಅವರದು (೧೯೭೩). ಇವರಿಗೂ ಸಹ ಹಸ್ತಪ್ರತಿಗಳ ಅಲಭ್ಯದಿಂದಾಗಿ ಬಿ. ಮಲ್ಲಪ್ಪನವರ ಪಾಠವೇ ಮುಖ್ಯವಾಗಿದೆ. ಅದನ್ನು ಕೇಂದ್ರವಾಗಿಟ್ಟುಕೊಂಡು ಕೆಲವೆಡೆಗಳಲ್ಲಿ ಸಂಸ್ಕೃತ ಗ್ರಂಥವನ್ನು ನೋಡಿ. ಕೆಲವೆಡೆಗಳಲ್ಲಿ ಓರಿಯಂಟಲ್ ಲೈಬ್ರರಿಯಲ್ಲಿರುವ ಹಸ್ತಪ್ರತಿಯನ್ನು ನೋಡಿ ಮತ್ತೆ ಕೆಲವೆಡೆಗಳಲ್ಲಿ ಮಲ್ಲಪ್ಪನವರ ಆವೃತ್ತಿಯಲ್ಲಿನ ಪಾಠಾಂತರಗಳ ಸಹಾಯದಿಂದ ತಮ್ಮ ಸಂಪಾದನೆಯಲ್ಲಿ ಅಲ್ಲಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿದ್ದಾರೆ. ಕಾದಂಬರಿಯು ಹನ್ನೊಂದನೆಯ ಶತಮಾನದಲ್ಲಿ ರಚಿತವಾಗಿರುವುದರಿಂದ ಱಟಿ, ಕುಳಗಳನ್ನು ಹಾಗೂ ಕೆಲವು ಹಳಗನ್ನಡದ ಪ್ರಯೋಗಗಳನ್ನು ಸೂಕ್ತಸ್ಥಾನದಲ್ಲಿ ಉಪಯೋಗಿಸಿ ಹಿಂದಣ ಪರಿಷ್ಕರಣದ ಅಚ್ಚಿನ ತಪ್ಪುಗಳನ್ನು ಸರಿಪಡಿಸಿ, ಭಾಷೆಗೆ ಸಂಬಂಧಿಸಿದ ಕೆಲವು ಸ್ಖಾಲಿತ್ಯಗಳನ್ನು ತಿದ್ದಿ ಅಧ್ಯಯನದ ಸೌಂಕರ್ಯಕ್ಕಾಗಿ ವೃತ್ತ, ಕಂದಗಳನ್ನು ಛಂದೋನಿಯಮಕ್ಕೆ ಅನುಗುಣವಾಗಿ ವಿನ್ಯಾಸಗೊಳಿಸಿ ಪ್ರಕಟಿಸಿದ್ದಾರೆ. ಸ್ಥೂಲವಾಗಿ ಹೇಳುವುದಾದರೆ ಇದನ್ನು ಬಿ. ಮಲ್ಲಪ್ಪ ಅವರ ಆವೃತ್ತಿಯ ಪರಿಷ್ಕೃತ ಪುನರ್ಮುದ್ರಣವೆಂದು ಕರೆಯಬಹುದು.

ಈ ಕೃತಿಗೆ ಅಭ್ಯಾಸಪೂರ್ಣ ದೀರ್ಘ ಪ್ರಸ್ತಾವನೆಯಿದೆ. ಸಂಸ್ಕೃತ ಸಾಹಿತ್ಯದಲ್ಲಿ ಬಾಣನ ಸ್ಥಾನ, ಕತೆಯ ಆಶಯ ಮತ್ತು ಸ್ವರೂಪ ಹಾಗೂ ನಾಗವರ್ಮನ ಕೃತಿಗಳ ಪರಿಚಯ ಈ ಎಲ್ಲ ಅಂಶಗಳನ್ನು ಪ್ರಸ್ತಾವನೆಯಲ್ಲಿ ಚರ್ಚಿಸಿದ್ದಾರೆ. ಅಧ್ಯಯನಕಾರನ ಸೌಕರ್ಯಕ್ಕಾಗಿ ಪದ್ಯವನ್ನು ಕಥಾವರಣ, ಚಂದ್ರಾಪೀಡನ ಜನನ ಬಾಲ್ಯ, ಚಂದ್ರಾಪೀಡನ ಜೈತ್ರ ಯಾತ್ರೆ, ಮಹಾಶ್ವೇತೆಯ ಸಂದರ್ಶನ, ಮಹಾಶ್ವೇತೆಯ ವೃತ್ತಾಂತ, ಕಾದಂಬರಿಯ ಪ್ರಥಮ ಸಂದರ್ಶನ, ಕಾದಂಬರಿಯ ದ್ವಿತೀಯ ಸಂದರ್ಶನ, ಚಂದ್ರಾಪೀಡನ ಪ್ರಾಣವಿಯೋಗ, ಚಂದ್ರಾಪೀಡ ಕಾದಂಬರಿಯರ ಪುನಸ್ಸಮಾಗಮ ಎಂದು ಒಂಬತ್ತು ಪರಿಚ್ಛೇದಗಳಲ್ಲಿ ವಿಂಗಡಿಸಿ ಅವುಗಳಿಗೆ ಉಚಿತವಾದ ಹೆಸರು ಕೊಟ್ಟಿದ್ದಾರೆ. ಈ ರೀತಿಯ ವಿಭಾಗ ಮೂಲದಲ್ಲಿಲ್ಲ. ಹಾಗೂ ಬಿ. ಮಲ್ಲಪ್ಪನವರ ಆವೃತ್ತಿಯಲ್ಲಿಯೂ ಇಲ್ಲ ಎಂಬುದನ್ನು ಗಮನಿಸಬೇಕು.

ಗ್ರಂಥಾಂತ್ಯದ ಭಾಗದಲ್ಲಿ ಎರಡು ಅನುಬಂಧಗಳಿವೆ. 'ಕಾದಂಬರೀ ದರ್ಪಣ' ಎಂಬ ಭಾಗ ತುಂಬ ಮೌಲಿಕವಾಗಿದೆ. ಅದರಲ್ಲಿ ಪ್ರತಿಯೊಂದು ಪ್ರಕರಣದ ಶಬ್ದಾರ್ಥ ವಿವೇಚನೆಯಿದೆ. ಇದನ್ನು ಒಂದರ್ಥದಲ್ಲಿ ಕಾದಂಬರಿಯ ನಿಘಂಟು ಎಂದು ಕರೆಯಬಹುದಾಗಿದೆ. ಈ ಭಾಗವನ್ನು ರಚಿಸುವಾಗ ಮಲ್ಲಪ್ಪನವರ ಆವೃತ್ತಿಯ ಪುಟಗಳ ಅಡಿಯಲ್ಲಿದ್ದ ಟಿಪ್ಪಣಿಗಳ ಭಾಗಗಳನ್ನು ಅಳವಡಿಸಿಕೊಂಡಿದೆ. ಪ್ರಥಮ ಮತ್ತು ಪ್ರಸಕ್ತ ಮುದ್ರಣಗಳ ಸಂಖ್ಯಾ ವಿವರಣಗಳೊಂದಿಗೆ ಕೃತಿಯ ಅಕಾರಾದಿಗಳನ್ನು ಎರಡನೆಯ ಅನುಬಂಧದಲ್ಲಿ ಕೊಡಲಾಗಿದೆ.

ಎನ್. ಅನಂತರಂಗಾಚಾರ್ಯ ಅವರು **'ಕುಮಾರರಾಮಸಾಂಗತ್ಯ ಸಂಗ್ರಹ', 'ಜಗನ್ನಾಥವಿಜಯ ಸಂಗ್ರಹ'** ಎಂಬ ಎರಡು ಪ್ರಾಚೀನ ಗ್ರಂಥಗಳನ್ನು ಸಂಗ್ರಹಿಸಿದ್ದಾರೆ. ವಿದ್ಯಾರ್ಥಿಗಳ ಪಾಠಕ್ಕೆ ಪ್ರಮಾಣವು ಅತಿ ಮೀರದಂತೆ ನೋಡಿಕೊಳ್ಳುವುದು ಅವರ ಸಂಗ್ರಹದ ಒಂದು ಮುಖ್ಯೋದ್ದೇಶ. ಈ ಉದ್ದೇಶ ಸಾಧನೆಗಾಗಿ ಕಥಾಸೂತ್ರಕ್ಕೆ ಅವಶ್ಯಕವಲ್ಲವೆಂದು ತೋರಿದ ಭಾಗಗಳನ್ನು ಅವು ಬೇರೆ ದೃಷ್ಟಿಯಿಂದ ಎಷ್ಟೇ ಚೆನ್ನಾಗಿದ್ದರೂ ಕೆಲವು ಕಡೆ ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ. ಕೆಲವು ಕಡೆ ಸಂಗ್ರಹಿಸಿದ್ದಾರೆ. ಅಲ್ಲದೆ, ಅಲ್ಲಲ್ಲಿ ಪದ್ಯಗಳಿರುವ ಕೆಲವು ಮಾತುಗಳನ್ನು ಮಾತ್ರ ಆರಿಸಿ ಜೋಡಿಸಿ ಗದ್ಯವಾಗಿ ಬರೆದಿದೆ. ವಾಚಕರ ಅನುಕೂಲಕ್ಕಾಗಿ ಆಯಾ ಸಂಗ್ರಹದ ಸ್ವರೂಪವನ್ನು ಅನುಲಕ್ಷಿಸಿ ಪಠ್ಯವನ್ನು ಕೆಲವು ಪರಿಚ್ಛೇದಗಳಾಗಿ ವಿಂಗಡಿಸಿ ಅವುಗಳಿಗೆ ಉಚಿತವಾದ ಹೆಸರನ್ನು ಕೊಟ್ಟಿದ್ದಾರೆ. ಸಂಗ್ರಹಕಾರ್ಯದಲ್ಲಿ ಅನಂತರಂಗಾಚಾರ್ಯ ಅವರ ಕಾವ್ಯವಿವೇಕ, ಕಾವ್ಯಾಭಿರುಚಿಗಳು ಜಾಗ್ರತವಾಗಿ ಕೆಲಸಮಾಡಿವೆ. ಪೀಠಿಕೆಯಲ್ಲಿಯ ಗದ್ಯ ಶೈಲಿ ಆದರ್ಶಪ್ರಾಯವಾದುದೆಂದು ಹೇಳಬಹುದು.

ಗ್ರಂಥ ಸಂಪಾದನೆ ಮತ್ತು ವಿದ್ವತ್ತಿನ ದೃಷ್ಟಿಯಿಂದ ಅವರ **ಸಾಹಿತ್ಯ ಭಾರತೀ** (೧೯೭೦) ಮತ್ತು **ಕನ್ನಡ ಚಂಪೂಕಾವ್ಯಗಳ ಪದ್ಯಾನುಕ್ರಮಣಿ** (೧೯೭೨) ಈ ಕೃತಿಗಳು ಬಹು ಚಿರಸ್ಮರಣೀಯವಾಗಿವೆ. ಇವು ಅವರ ಅಖಂಡ ಜೀವನದ ದುಡಿಮೆಯ ಫಲವೆಂದು ಹೇಳಬಹುದು. **ಸಾಹಿತ್ಯ ಭಾರತೀ** ಅವರ ಅಪೂರ್ವ ಕೃತಿ. ಇಂಗ್ಲಿಷ್ ಭಾಷೆಯೂ ಸೇರಿದಂತೆ ಸಂಸ್ಕೃತ,ಪಾಲಿ, ಪ್ರಾಕೃತ, ಅಪಭ್ರಂಶ, ಕನ್ನಡ, ತಮಿಳು, ತೆಲುಗು ಮುಂತಾದ ಭಾರತದ ಇಪ್ಪತ್ತು ಅಧಿಕೃತ ಭಾಷೆಗಳ ಸಾಹಿತ್ಯ ಚರಿತ್ರೆಯನ್ನು ಉಗಮದಿಂದ ಇಂದಿನವರೆಗೆ ಸಮೀಕ್ಷಿಸಿದ ಮತ್ತೊಂದು ಗ್ರಂಥವಿಲ್ಲ. ಈ ಗ್ರಂಥದಲ್ಲಿ ಆಯಾ ಭಾಷೆಯನ್ನಾಡುವ ಭಾಷಿಕರ ಭೌಗೋಳಿಕ ವ್ಯಾಪ್ತಿ, ಮೂಲ, ಇತರ ಭಾಷೆಗಳ ಸಂಪರ್ಕ, ಕವಿಕಾವ್ಯಪರಿಚಯ, ಆಯಾ ಭಾಷೆಯ ಸಾಹಿತ್ಯದ ಮೇಲೆ ಇತರ ಭಾಷೆಗಳ ಪ್ರಭಾವ, ಆಯಾ ಭಾಷೆಯ ಸಾಹಿತ್ಯ ಚರಿತ್ರೆಯ ವಿವಿಧ ಹಂತಗಳು ಮೊದಲಾದ ವಿಷಯಗಳು ಸ್ಪಷ್ಟವಾಗಿ ಮತ್ತು ವಿವರವಾಗಿ ನಿರೂಪಿತವಾಗಿವೆ. ಭಾರತೀಯ ಚರಿತ್ರೆಯನ್ನು ಅಭ್ಯಾಸ ಮಾಡುವವರಿಗೆ ಈ ಗ್ರಂಥ ಮುಖ್ಯ ಆಕರವಾಗುತ್ತದೆ. ಈ ಕೃತಿ ಅವರಿಗೆ ನಾಡಿನಲ್ಲಿ ಖ್ಯಾತಿಯನ್ನು ತಂದಿದೆ. ಕೃತಿರಚನೆಯ ಉದ್ದಕ್ಕೂ ಲೇಖಕರ ಶ್ರಮ ಮತ್ತು ವಿದ್ವತ್ತನ್ನು ಕುರಿತು ಎಷ್ಟು ಹೇಳಿದರೂ ಕಡಿಮೆ.

ಅನುಕ್ರಮಣಿಕೆಗಳು ಸಂಶೋಧನೆಯಲ್ಲಿ ಬಹುಮುಖ್ಯ ಆಕರಗಳಾಗುತ್ತವೆ. ಸಂಸ್ಕೃತ, ತಮಿಳು ಸಾಹಿತ್ಯದಲ್ಲಿ ಆಧುನಿಕಪೂರ್ವ ಸಾಹಿತ್ಯ ಕೃತಿಗಳಿಗೆ ಪದ್ಯಾನುಕ್ರಮಣಿಕೆಗಳು ರಚಿತವಾಗಿವೆ. ಆದರೆ ಕನ್ನಡದಲ್ಲಿ ಇಲ್ಲ ಎನ್ನುವಷ್ಟರ ಮಟ್ಟಿಗೆ ವಿರಳ. ಅನಂತರಂಗಾಚಾರ್ಯ ಅವರ ಚಂಪೂ ಕಾವ್ಯಗಳನ್ನು ಕೇಂದ್ರವಾಗಿಟ್ಟುಕೊಂಡು **'ಕನ್ನಡ ಚಂಪೂ ಕಾವ್ಯಗಳ ಪದ್ಯಾನುಕ್ರಮಣಿ'** ಎಂಬ ಬೃಹದ್ಗ್ರಂಥವನ್ನು ಸಿದ್ಧಪಡಿಸಿದ್ದಾರೆ (೧೯೭೨). ಹಳಗನ್ನಡ ಚಂಪೂ ಕಾವ್ಯಗಳಲ್ಲಿ ತಕ್ಕಮಟ್ಟಿನ

ಪರಿಣತಿಯನ್ನು ಪಡೆದ ಅಧ್ಯಯನಕಾರರಿಗೆ ಈ ಗ್ರಂಥ ತುಂಬ ಉಪಯುಕ್ತವಾಗುತ್ತದೆ. ವಿದ್ವಾಂಸರು ಅಥವಾ ಹಳಗನ್ನಡ ಸಾಹಿತ್ಯದಲ್ಲಿ ಆಸಕ್ತರಾಗಿರುವವರು ವಿದ್ವತ್ತಿನ ಚರ್ಚೆಯಲ್ಲಿ ತೊಡಗಿದಾಗ ಯಾವುದೋ ಕಾವ್ಯದ ಮೊದಲ ಪಂಕ್ತಿ ನೆನಪಾಗುತ್ತದೆ. ಆದರೆ ಆ ಪಂಕ್ತಿ ಯಾವ ಕಾವ್ಯದ್ದು, ಯಾವ ಪದ್ಯದ್ದು, ಯಾವ ಆಶ್ವಾಸದ್ದು, ಯಾವ ಸಂದರ್ಭದಲ್ಲಿ ಅದು ಉಕ್ತವಾಗಿದೆ ಎಂಬುದು ಅವರಿಗೆ ಎಷ್ಟು ಯೋಚಿಸಿದರೂ ಹೊಳೆಯದಿರಬಹುದು. ಆ ಸಂದರ್ಭದಲ್ಲಿ ವಿದ್ವಾಂಸ ಮಿತ್ರರ ನೆರವೂ ಪ್ರಯೋಜನಕ್ಕೆ ಬಾರದೆ ಹೋಗಬಹುದು. ಅದನ್ನು ಒದಗಿಸುವ ಯಾವ ಗ್ರಂಥವೂ ಕನ್ನಡದಲ್ಲಿ ಇದುವರೆಗೆ ಇರಲಿಲ್ಲವೆಂದೇ ಹೇಳಬಹುದು. ಆ ಕೊರತೆಯನ್ನು ಅನಂತರಂಗಾಚಾರ್ಯರ ಈ ಕೃತಿ ತುಂಬಿದೆ. ಪದ್ಯದ ಮೊದಲ ಪಂಕ್ತಿ, ಕೃತಿ, ಆಶ್ವಾಸ, ಪದಸಂಖ್ಯೆ ಈ ಕ್ರಮದಲ್ಲಿ ಕೃತಿ ರಚಿತವಾಗಿದೆ. ಚಂಪೂ ಕೃತಿಗಳಿಗೆ ಸಂಬಂಧಿಸಿದಂತೆ ನಡೆದ ಕೆಲಸದ ಮಾದರಿಯಲ್ಲೇ ಇತರ ಸಾಹಿತ್ಯ ಪ್ರಕಾರದ ಕೃತಿಗಳಿಗೂ ಅನುಕ್ರಮಣಿಕೆಗಳು ಸಿದ್ಧವಾಗಬೇಕಾಗಿವೆ. ಈ ದಿಸೆಯಲ್ಲಿ ಮೊದಲ ಅತ್ಯಂತ ಸಾರ್ಥಕ ಪ್ರಯತ್ನ ಮಾಡಿದವರು ಅನಂತರಂಗಾಚಾರ್ ಅವರು.

ಅನಂತರಂಗಾಚಾರ್ ಅವರು ಪ್ರಬುದ್ಧ ಕರ್ಣಾಟಕದ ಐವತ್ತು ಸಂಪುಟಗಳ ಕವಿಕಾವ್ಯ ಸೂಚಿಯನ್ನು ಸಿದ್ಧಪಡಿಸಿದ್ದಾರೆ. ಸಂಪಾದಿತವಾದ **'ಮಾನೌಮಿ ಚೌಪದ'** ಅವರಿಂದ ಜಾನಪದಗೀತೆಯಾಗಿದೆ. ಆಡುನುಡಿಯನ್ನು ಸಮರ್ಥವಾಗಿ ದಾಖಲಿಸಿದ ಇಲ್ಲಿರುವ ಗ್ರಂಥಪಾಠ ಬಹುಮಟ್ಟಿಗೆ ಶುದ್ಧವಾಗಿದೆ. ಸಂಗ್ರಹದ ಕೊನೆಯಲ್ಲಿ ಸೂಕ್ತ ಟಿಪ್ಪಣಿಗಳಿರುವುದರಿಂದ ಬಹು ಉಪಯುಕ್ತವಾಗಿದೆ.

ಇವುಗಳೆಲ್ಲ ಗ್ರಂಥ ಸಂಪಾದನೆಯ ದೃಷ್ಟಿಯಿಂದ ಎಷ್ಟು ಕ್ರಮಬದ್ಧವಾಗಿವೆಯೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅವರು ಕೊಟ್ಟಿರುವ ಗ್ರಂಥ ಪಾಠಗಳು ಮೂಲಕ್ಕೆ ಹತ್ತಿರವಾಗಿವೆ. ಇತರ ಹಸ್ತಪ್ರತಿಗಳ ಪಾಠಾಂತರಗಳನ್ನು ಗುರುತುಮಾಡಿಕೊಂಡು, ಪಾಠವಿಮರ್ಶೆ ಮತ್ತು ಪಾಠ ನಿರ್ಣಯಗಳನ್ನು ಅದರಲ್ಲಿಯೇ ಉಚಿತ ಚಿಹ್ನೆಗಳಿಂದ ಗುರುತಿಸಿಕೊಂಡು ಗ್ರಂಥಾಧ್ಯಯನಕ್ಕೆ ಹಾಗೂ ಈ ಕುರಿತು ಹೆಚ್ಚಿನ ಅಧ್ಯಯನಕ್ಕೆ ಅನುಕೂಲವಾಗುವಂತಹ ಮಾಹಿತಿಭರಿತವೂ ವೈವಿಧ್ಯಮಯವೂ ಉಪಯುಕ್ತವೂ ಆದ ಅನುಬಂಧಗಳನ್ನು ಕೊಡುವುದರಲ್ಲಿಯೂ ಕಟ್ಟಕಡೆಯದಾಗಿ ಮುದ್ರಣದ ಪ್ರತಿಯನ್ನು ಸಿದ್ಧ ಮಾಡಿರುವ ಗ್ರಂಥ ಸಂಪಾದನೆಯ ಪ್ರಮುಖ ಹಂತಗಳನ್ನು ಅನಂತರಂಗಾಚಾರ್ಯರ ಸಂಪಾದನೆಯಲ್ಲಿ ಕಾಣಬಹುದು. **'ಸೂಕ್ತಿಸುಧಾರ್ಣವಂ', 'ಕಾವ್ಯಸಾರಂ', 'ಕರ್ಣಾಟಕ ಕಾದಂಬರಿ', 'ಕರ್ಣಾಟಕ ಪಂಚತಂತ್ರಂ'** ಈ ನಾಲ್ಕು ಸಂಪಾದಿತ ಕೃತಿಗಳು ಕನ್ನಡ ಸಂಪಾದನೆಯ ಕ್ಷೇತ್ರಕ್ಕೆ ಮಾತ್ರವಲ್ಲದೆ ಕನ್ನಡ ಸಾಹಿತ್ಯಕ್ಕೂ ಅಭೂತಪೂರ್ವವಾದ ಅತ್ಯಂತ ಬೆಲೆಯುಳ್ಳ ಕೊಡುಗೆ. ಈ ಕ್ಷೇತ್ರದಲ್ಲಿ ಕೆಲಸ ಮಾಡಬೇಕೆನ್ನುವವರಿಗೆ ಅತ್ಯುತ್ತಮವಾದ ಮಾದರಿಗಳು. ಎಲ್ಲ ಸಂಪಾದಕರೂ ಹೀಗೆ ಪರಿಶ್ರಮಪಟ್ಟು ಶ್ರದ್ಧೆಯಿಂದ ಗ್ರಂಥ ಸಂಪಾದಿಸಿದರೆ ಹಸ್ತಪ್ರತಿಗಳಿಂದ ಕವಿ ಬಿಡುಗಡೆಯಾಗಿ ಉತ್ತಮಪಾಠಗಳು ಲಭಿಸುತ್ತವೆ. ಈ ದೃಷ್ಟಿಯಿಂದ ಅನಂತರಂಗಾಚಾರ್ ಅವರ ಗ್ರಂಥಸಂಪಾದನೆಯ ವಿಧಾನ ಮೇಲ್ಪಟ್ಟದ್ದಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

■

## ಟೀಕೆ - ಟಿಪ್ಪಣಿಗಳು

### ಹೆಣ್ಣುತನದ ಬಹುಮುಖಿ ಇತಿಹಾಸದ ಶೋಧ

"ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು" ಇದು ಡಾ॥ ಗಾಯತ್ರೀ ನಾವಡ ಅವರ ಸಂಶೋಧನ ಮಹಾಪ್ರಬಂಧ. ಜಾನಪದ ನಿಷ್ಠೆ, ಪ್ರಾಮಾಣಿಕತೆ, ಕರಾರುವಾಕ್ಕಾದ ವಿಚಾರ-ವಿಮರ್ಶೆಗಳಿಂದ ಕನ್ನಡ ಜಾನಪದ ಅಧ್ಯಯನ ಕ್ಷೇತ್ರದಲ್ಲಿ ಡಾ॥ ಗಾಯತ್ರೀ ನಾವಡ ಅವರು ಚಿರಪರಿಚಿತರು. ಕಳೆದುಹೋದ, ಅನುಕ್ತವಾದ, ಕಾಲಗರ್ಭದಲ್ಲಿ ಲೀನವಾದ ಹೆಣ್ಣಿನ ಚರಿತ್ರೆಯನ್ನು ಕಟ್ಟಿಕೊಡುವ ಪ್ರಾಮಾಣಿಕ ಪ್ರಯತ್ನವನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಅವರು ಮಾಡಿದ್ದಾರೆ. ಈ ಕೃತಿ ನಮ್ಮ ಜಾನಪದ ಅಧ್ಯಯನ ಎತ್ತ ಸಾಗಬೇಕು ಎಂಬ ಮತ್ತೊಂದು ಮಜಲನ್ನು ತೆರೆದಿಟ್ಟಿದೆ. ಭಾರತೀಯ ಸ್ತ್ರೀವಾದಿ ಅಧ್ಯಯನಕ್ಕೆ ಪಾಶ್ಚಾತ್ಯರ ಆಲೋಚನೆಗಳು ತೋರುಬೆರಳುಗಳಾಗಬೇಕೇ ಹೊರತು ಅಂತಿಮ ಗುರಿಗಳಾಗಬಾರದು ಎಂಬ ಕಾಳಜಿ ಈ ಮಹಾಪ್ರಬಂಧದ ಉದ್ದಕ್ಕೂ ಢಾಳಾಗಿ ಕಂಡುಬರುತ್ತದೆ. ಕರಾವಳಿ ಪ್ರದೇಶದ ಸಾಂಸ್ಕೃತಿಕ ಇತಿಹಾಸವನ್ನು ಪುನಾರಚಿಸುವಲ್ಲಿ ಈ ಕೃತಿಗೆ ವಿಶೇಷ ನೆಲೆ ಬೆಲೆಯಿದೆ. ಜಾನಪದ ಸಾಹಿತ್ಯದ ಸಂಪಾದನೆ ಸಂಗ್ರಹಗಳ ಜೊತೆಗೆ ಅದನ್ನು ನಮ್ಮ ಸಂಸ್ಕೃತಿಯ ಬಳಿಯಿಟ್ಟು ಅರ್ಥೈಸಬೇಕಾದ ರೀತಿಯನ್ನು ಲೇಖಕರು ತೆರೆದಿಟ್ಟಿದ್ದಾರೆ. ಆದ್ದರಿಂದ ಇದೊಂದು ಭಿನ್ನಪರಿಯ ಅಧ್ಯಯನ ಕೃತಿಯೂ ಹೌದು. ಕನ್ನಡ ಜಾನಪದದ ಜೀವನಾಡಿಯನ್ನು ಪರೀಕ್ಷಿಸುವ ಕೆಲಸವಿಲ್ಲಿ ಯಶಸ್ವಿಯಾಗಿ ನಡೆದಿದೆ ಎಂಬುದು ಸಂತೋಷದ ಸಂಗತಿ. ಜಾನಪದದ ಬಗೆಗಿನ ನಮ್ಮ ತಿಳಿವಳಿಕೆಯನ್ನು ಹೆಚ್ಚಿಸುವ ಈ ಕೃತಿ ಕನ್ನಡ ಸಾಹಿತ್ಯಕ್ಕೆ ಒಂದು ಮಹತ್ವದ ಸೇರ್ಪಡೆಯಾಗಿದೆ.

ಶತ-ಶತಮಾನಗಳಿಂದ ವ್ಯವಸ್ಥೆಯ ಭೀಕರ ಸುಳಿಗೆ ಸಿಕ್ಕು 'ಸ್ತ್ರೀ' ಚರಿತ್ರೆಯ ದಾಖಲೆಯಿಂದ ದೂರ ಉಳಿದಿದ್ದಾಳೆ. ಚರಿತ್ರೆಯಲ್ಲಿ ಮಹಿಳೆಯ ಅಸ್ತಿತ್ವ ಮತ್ತು ಪ್ರತಿನಿಧೀಕರಣ ಅನುಕ್ತವಾಗಿದೆ ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಯಾವುದೇ ಸಮಾಜದ ಬೆಳವಣಿಗೆಯಲ್ಲಿಯೂ ಹೆಣ್ಣಿನ ಪಾತ್ರ ಹಾಗೂ ಪಾಲು ಬಹುಮುಖ್ಯವಾದುದು. ಹೀಗಿದ್ದೂ ಇತಿಹಾಸದಲ್ಲಿ ಪುರುಷ ಹೆಣ್ಣನ್ನು ಸೊತ್ತಾಗಿ ಕಂಡನೇ ಹೊರತು ವ್ಯಕ್ತಿಯಾಗಿ ಅಲ್ಲ. ಇದೆಲ್ಲವನ್ನು ಗಮನಿಸಿದ ಪ್ರಸ್ತುತ ಅಧ್ಯಯನ 'ತನ್ನ ಸಮಾಜಕ್ಕೆ, ತನ್ನ ಸಂಸ್ಕೃತಿಗೆ, ಆ ಮೂಲಕ ಮನುಕುಲದ ಇತಿಹಾಸಕ್ಕೆ ಸ್ತ್ರೀಯರು ಕೊಟ್ಟ ಕೊಡುಗೆಯನ್ನು ಕುರಿತು ಮರುಚಿಂತನೆಗೆ ನಮ್ಮನ್ನು ಗುರಿಮಾಡಿದೆ. ಕರಾವಳಿಯ ಮಾತೃ ಪ್ರಧಾನ ವ್ಯವಸ್ಥೆ ಹೆಣ್ಣಿಗೆ ಕೊಟ್ಟ ಧೈರ್ಯ ಹಾಗೂ ಸ್ವಾಭಿಮಾನದ ವಿಚಾರವೂ ಇಲ್ಲಿ ಪ್ರಸ್ತಾಪಗೊಂಡಿದೆ. ಅಲ್ಲದೆ ಕರಾವಳಿಯ ವಿಶಿಷ್ಟವಾದ ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಸ್ತ್ರೀವಾದದ ಸಂಬಂಧ ಹಾಗೂ ಸ್ವರೂಪವನ್ನು ವಿಶ್ಲೇಷಿಸುವ ಕಾರ್ಯ ಈ ಕೃತಿಯಲ್ಲಿ ಸಫಲವಾಗಿದೆ. ಕರಾವಳಿಯ ಸ್ತ್ರೀಯರ ಜೀವನ-ವಿಧಾನ, ಅವಳ ಜೀವನಮೌಲ್ಯಗಳು, ಆಕೆ ಎದುರಿಸಿದ ಸಮಸ್ಯೆ-ಸವಾಲು-ಸಂಘರ್ಷಗಳು ಮೊದಲಾದ ವಿವರಗಳ ಮೂಲಕ ಆಯಾ ಕಾಲಘಟ್ಟದ ಸ್ತ್ರೀ ಸಾಧನೆಯನ್ನು ನವೀನ ಪರಿಕಲ್ಪನೆಗಳ ಮೂಲಕ ಸಾದರಪಡಿಸಿದ್ದಾರೆ. ಚಲನಶೀಲವಾದ ಜಾನಪದ ಜಗತ್ತಿನ ಸತ್ಯವನ್ನು ಅನನ್ಯವೆಂಬಂತೆ ಅಧಿಕೃತವಾಗಿ ಆತ್ಮೀಯವಾಗಿ ಸೆರೆಹಿಡಿದ, ಶೋಧಿಸಿದ ಹಿರಿಮೆಗೆ ಡಾ॥ ಗಾಯತ್ರೀನಾವಡ ಅವರು ಪಾತ್ರರಾಗಿದ್ದಾರೆ.

ಈ ಕೃತಿ ಬರೇ ವಿಮರ್ಶಿಸುವ, ಟೀಕಿಸುವ, ಎಲ್ಲವನ್ನೂ ಸಾರಾಸಗಟಾಗಿ ಅಲ್ಲಗೆಳೆಯುವ 'ಅಕಾಡೆಮಿಕ್' ಪ್ರಯತ್ನವಾಗಿ ಉಳಿದಿಲ್ಲ ಎಂಬುದು ಗಮನೀಯ ಅಂಶ. ತನ್ನ ಸುತ್ತಲಿನ ಜಗತ್ತನ್ನು ಬದಲಿಸುವ ಉದ್ದೇಶದ ಆಕಾಂಕ್ಷೆಯನ್ನು ಇದು ಬೆನ್ನಿಗಿಟ್ಟುಕೊಂಡಿದೆ. ಚರಿತ್ರೆಯ ಮೌನವನ್ನು, ಅಸ್ಪಷ್ಟತೆಯನ್ನು ಬದಿಗೆ ಸರಿಸಿ ಬದುಕನ್ನು ನೋಡಬೇಕಾದ ಹೊಸ ರೀತಿಯನ್ನು ಹೇಳಿಕೊಡುತ್ತಿದೆ. ಇದನ್ನು ಮೌನಮುರಿದ ಮಾತುಗಳಲ್ಲಿ ಲೇಖಕರು ಖಚಿತವಾಗಿ ಹೇಳಿಕೊಂಡಿದ್ದಾರೆ.

"ಇವತ್ತು ಜಗತ್ತಿನ ಎಲ್ಲ ಅಲಕ್ಷಿತ ಸಮುದಾಯಗಳು ಪ್ರಭುಸಂಸ್ಕೃತಿ ಹೊರಿಸಿದ ಸಾಂಸ್ಕೃತಿಕ ವಿಕಲ್ಪ ಹಾಗೂ ವಿಸ್ಮೃತಿಯ ಕೋಶ ಹರಿದು ಬಿಡುಗಡೆಗಾಗಿ ಹವಣಿಸುತ್ತಿವೆ. ಹೀಗೆ ಸಂಸ್ಕೃತಿಯೊಂದು ತನ್ನ ಅನನ್ಯತೆಯ ಧ್ಯಾನ ಮತ್ತು ಹುಡುಕಾಟದಲ್ಲಿನ ಸವಾಲಿಗೆ ದೇಶೀಯ ಚಿಂತನೆಯಲ್ಲಿ ತನ್ನದೇ ಇತಿಹಾಸವನ್ನು ಕಟ್ಟಿಕೊಳ್ಳಬಯಸುವುದು ವಿಮೋಚನೆಯ ತಂತ್ರವಾಗಿ ನಿಲ್ಲುವಲ್ಲಿ ದೇಶೀಯ ನೋಟಕ್ಕಿರುವ ಶಕ್ತಿ ಅರ್ಥವಾಗುತ್ತದೆ. ಈ ನೆಲೆಯಲ್ಲಿ ಪುರುಷ ದೃಷ್ಟಿಯ ಹೆಣ್ಣುತನದ ಅರ್ಥ ಮತ್ತು ಗ್ರಹಿಕೆಯನ್ನು ಮರು ನಿರ್ವಚಿಸುವ ಆಶಯ ನನ್ನ ಆ ಅಧ್ಯಯನದ್ದು. ಮಾತೃರೂಪಿ ಸಾಂಸ್ಕೃತಿಕ ಪರಿವಲಯದ ಮೌಖಿಕ ಲೋಕದ ಮಹಿಳಾ ಸಂಕಥನದಿಂದ ಹೆಣ್ಣುತನದ ಮರುನಿರ್ವಚನ ಸಾಧ್ಯ ಎನ್ನುವುದನ್ನು ಆ ಅಧ್ಯಯನ ಕಂಡುಕೊಂಡ ಶೋಧನೆ. ಇದು ಭಾರತೀಯ ಸ್ತ್ರೀವಾದಿ ಕಟ್ಟೋಣದ ಒಂದು ಕಲ್ಲು ಮಾತ್ರ. ಒಂದು ವಿನ್ಯಾಸ ಮಾತ್ರ. ಇಂಥ ನೂರಾರು ದೇಶೀಯ ವಿನ್ಯಾಸಗಳಲ್ಲಿ ಅದು ರೂಪುಪಡೆಯಬೇಕಾಗಿದೆ". ಈ ಕೃತಿಯಲ್ಲಿ ಎಂಟು ಅಧ್ಯಾಯಗಳಿದ್ದು ಅವುಗಳ ಒಳಗೇ ಉಪಅಧ್ಯಾಯಗಳಿವೆ. ಅಧ್ಯಯನದ ಉದ್ದೇಶ, ಸ್ತ್ರೀವಾದಿ ಅಧ್ಯಯನದ ಹಾದಿಯ ಹೆಜ್ಜೆಗಳು, ಸ್ತ್ರೀವಾದದ ಸ್ವರೂಪ ಮತ್ತು ಸಂಸ್ಕೃತಿ ಮತ್ತು ಕರಾವಳಿ ಜನಪದ ಸಾಹಿತ್ಯ ಸಾಹಿತ್ಯ, ಸ್ತ್ರೀಶಕ್ತಿಯ ಮಾದರಿಯಾಗಿರಿಸಿ ಸ್ತ್ರೀ ಸಂವೇದನೆ-ಅಭಿವ್ಯಕ್ತಿ; ಲಿಂಗ, ಲಿಂಗ ಪ್ರಭೇದ ಹಾಗೂ ಪಠ್ಯಸ್ವರೂಪ ಹಾಗೂ ಸಂಶೋಧನೆಯಲ್ಲಿ ಈ ಪ್ರಬಂಧ ಬಿಚ್ಚಿಕೊಂಡಿದೆ. ಕನ್ನಡ ಜಾನಪದ ಅಧ್ಯಯನದ ಮಿತಿಗಳನ್ನು ಎತ್ತಿ ತೋರಿ ಅದು ಸಾಗಬೇಕಾದ ಮಾರ್ಗವನ್ನು ಆರಂಭದಲ್ಲೇ ಸೂಚಿಸಿದ್ದಾರೆ. ಆ ಮೂಲಕ ಅನೇಕ ಹೊಸತು ಹೊಸತು ಚಿಂತನಗಳನ್ನು ಚಿಕಿತ್ಸಕ ದೃಷ್ಟಿಕೋನಗಳನ್ನು ನೀಡಿದ್ದಾರೆ.

* ಕನ್ನಡ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಗಳು ಪಾಶ್ಚಾತ್ಯ ಸ್ತ್ರೀವಾದಿ ಸಿದ್ಧಾಂತದ ಅನುಕರಣೆಯಲ್ಲಿ ನಡೆದರೆ ಸ್ತ್ರೀವಾದಿ ಜಾನಪದ ಅಧ್ಯಯನ ಕೂಡಾ ಅದೇ ಜಾಡಿನಲ್ಲಿ ಸಾಗಿದ್ದು ತನ್ನದೇ ಆದ ಹಾದಿಯ ಹೆಜ್ಜೆಗಳನ್ನು ಮೂಡಿಸುವುದು ಅದಕ್ಕೆ ಸಾಧ್ಯವಾಗಿಲ್ಲ. ಇದುವರೆಗಿನ ಸ್ತ್ರೀವಾದಿ ಜಾನಪದ ಬರಹಗಳು ಜಾನಪದದಲ್ಲಿನ ಹೆಣ್ಣಿನ ಚಿತ್ರಗಳಾಗಿವೆ ಹೊರತು ಹೆಣ್ಣುತನದ ಅಸ್ಮಿತೆಯ ಚಿತ್ರವಾಗಿಲ್ಲ. (ಪುಟ ೬)

* ನಮ್ಮ ಇಂದಿನ ಅಗತ್ಯದಲ್ಲಿ ಸ್ತ್ರೀವಾದ ಈ ಲಿಂಗ ವ್ಯವಸ್ಥೆಯನ್ನು ಕಂಗಾಲುಗೊಳಿಸಿ ತನ್ನತನದ ಅಸ್ಮಿತೆಯನ್ನು ದಾಖಲಿಸಿದ ಹೆಣ್ಣಿನ ಚರಿತ್ರೆ ಕಟ್ಟುವ ಕೆಲಸವಾಗಬೇಕಾಗಿದೆ. (ಪು.೭)

* ಶತಮಾನಗಳಿಂದ ಶಿಷ್ಟ ಪರಂಪರೆಯಲ್ಲಿ ಪುರುಷ ಅಕ್ಷರಜ್ಞಾನ ಪಡೆದು ಸಾಹಿತ್ಯಿಕ ಸಾಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಂಡು ಬಂದಿದ್ದಾನೆ. ಆದರೆ ಬಹುತೇಕ ಜನಪದ ಸಾಹಿತ್ಯದ ನಿರ್ಮಾಪಕರು ಮತ್ತು ನಿರೂಪಕರು ಮಹಿಳೆಯರಾಗಿದ್ದು ವಿಶಿಷ್ಟ ಮಹಿಳಾ ಪರಂಪರೆಯನ್ನು ಹೊಂದಿರುವುದನ್ನು ಕಾಣಬಹುದು. ವಾಸ್ತವವಾಗಿ ಜನಪದ ಪ್ರಕಾರಗಳಾದ ಅಜ್ಜಿಕತೆ,

ಅಜ್ಜಮದ್ದುಗಳಂಥವು ಹೆಣ್ಣಿನ ಹೆಸರಿನಲ್ಲಿದ್ದು ಆಕೆಯ ಅಭಿವ್ಯಕ್ತಿ ಶಕ್ತಿಯನ್ನು ದಾಖಲಿಸಿವೆ. ಆದರೆ ರಾಷ್ಟ್ರೀಯ ಸಂಸ್ಕೃತಿ ಸಂರಚನೆಯ ನಿರ್ಮಾಣದಲ್ಲಿ ಹೆಣ್ಣಿನ ಈ ಮಹತ್ವದ ಕೊಡುಗೆಯನ್ನು ಗಮನಿಸಲಾಗಿಲ್ಲ. ಹೀಗೆ ದಾಖಲಾಗದ ಸ್ತ್ರೀತ್ವ ಮತ್ತು ಸಂಸ್ಕೃತಿಯ ಮಹಿಳಾ ಮುಖವನ್ನು ಶೋಧಿಸುವುದು ಸ್ತ್ರೀವಾದಿಗಳ ಮುಖ್ಯ ಉದ್ದೇಶ (ಪುಟ ೪೦).

* ಸ್ತ್ರೀವಾದಿ ಜಾನಪದ ಅಧ್ಯಯನವು ಒಟ್ಟು ಜಾನಪದ ಸಂಪನ್ನತೆಯನ್ನು ಚಿತ್ರಿಸುವುದಿಲ್ಲ. ಬದಲು ಮಹಿಳಾ ಬದುಕು ಮತ್ತು ಜಗತ್ತು ಪುರುಷರಿಗಿಂತ ಹೇಗೆ ಭಿನ್ನವಾಗಿದೆ ಎನ್ನುವುದನ್ನು ಹೇಳುವುದಾಗಿದೆ. ಅಷ್ಟೇ ಅಲ್ಲ, ಮಹಿಳೆಯರನ್ನು ಸೃಜನಕ್ರಿಯೆಯ ಶಕ್ತಿಯಾಗಿಯೂ ಅರಿಯುವುದಾಗಿದೆ. (ಪುಟ ೪೪)

* ಮಹಿಳಾ ದನಿಯ ಅಭಿವ್ಯಕ್ತಿ ನೆಲೆಯಾದ ಜನಪದ ಸಾಹಿತ್ಯ ಸ್ತ್ರೀವಾದಿ ಅಧ್ಯಯನದಲ್ಲಿ ಬಹಳ ಮುಖ್ಯವಾಗುತ್ತದೆ. ಸಾಂಪ್ರದಾಯಿಕ ಹೆಣ್ಣಿನ ಏಕಮುಖೀ ಇತಿಹಾಸವನ್ನು ಕಟ್ಟಿಕೊಳ್ಳಲು ನಾವು ಜಾನಪದ ಲೋಕಕ್ಕೆ ಹೋಗಬೇಕಾಗಿದೆ. (ಪುಟ ೫೭)

* ಪಿತೃರೂಪೀ ಸಂಸ್ಕೃತಿಯಲ್ಲಿ ಪುರುಷನ ದತ್ತ ಮಾದರಿಯಲ್ಲೇ ಹೆಣ್ಣುತನ ಪ್ರಕಟಗೊಂಡಿದ್ದರೆ ಮಾತೃರೂಪೀ ಸಂಸ್ಕೃತಿಯಲ್ಲಿ ಈ ಮಾದರಿಯನ್ನು ಮುರಿದು ದಾಟಿಹೋದ ಹೆಣ್ಣುತನದ ಶಕ್ತಿ ಮಾದರಿಯನ್ನು ಜನಪದ ಗೀತೆಗಳಲ್ಲಿ ಕಾಣಬಹುದು. ಹೆಣ್ಣುತನವನ್ನು ನಾವಿಂದು ಒಪ್ಪಿಕೊಳ್ಳಬೇಕಾದುದು ಈ ಬಗೆಯ ಅಭಿಮಾನದ ಆತ್ಮವಿಶ್ವಾಸದ ಆಕೃತಿಗಳಲ್ಲಿ, ಅವಮಾನದ ಅಸಹಾಯಕತೆಯ ಮೂರ್ತಿಯಲ್ಲಲ್ಲ. (ಪುಟ ೭೯)

* ಪಾಡ್ದನಗಳು ಪ್ರಕಟಿಸುವ ಸ್ತ್ರೀತ್ವದ ಪ್ರತಿನಿಧೀಕರಣ ಅಖಿಲ ಭಾರತೀಯ ಸಾಂಪ್ರದಾಯಿಕ ಮಾದರಿಗೆ ವಿರುದ್ಧವಾದುದು. ಹೆಣ್ಣೊಬ್ಬಳ ಆತ್ಮಗೌರವ, ಧೈರ್ಯ, ಸ್ವಾಭಿಮಾನ, ಸ್ತ್ರೀತ್ವದ ಇತ್ಯಾತ್ಮಕ ಅಂಶವಾಗಿ ಇಲ್ಲಿ ಕಾಣಲಾಗಿದೆ. (ಪುಟ ೧೨೭)

* ಪುರುಷ ಜಗತ್ತಿನ ಹೆಣ್ಣು ಉದ್ದಕ್ಕೂ ಶೂನ್ಯದಲ್ಲೇ ಲೀನದಲ್ಲೇ ಬದುಕು ಮಾಡಿದ್ದಳೆ? ಅಥವಾ ಪುರುಷ ಪ್ರಭುತ್ವದ ಕೋಟೆಯಲ್ಲಿ ಕಿಂಡಿಕೊರೆದು ಅವನ ಕಣ್ಣಿಗೆ ಬೀಳದ ತನ್ನದೇ ಲೋಕವನ್ನು ಕಟ್ಟಿದ್ದಳೆ? ಹೀಗೆ ಹುಡುಕಾಟ ನಡೆಸುತ್ತ ಹೊರಟ ನನಗೆ ಮಹಿಳಾ ಪರಂಪರೆಯನ್ನು ಒಳಗೊಳ್ಳುತ್ತ ಕಟ್ಟಿಕೊಳ್ಳುವುದು ಸಾಧ್ಯವಾಯಿತು. ಮಾತೃರೂಪೀ ಮೌಖಿಕ ಲೋಕದ ಹೆಣ್ಣುತನದ ಪ್ರಕಟನೆ ನನಗೆ ಹೊಸ ಸತ್ಯವನ್ನು ಕಾಣಿಸಿತು. ಅದು ಪುರುಷನಿರ್ವಚನದ 'ಸ್ತ್ರೀಶೂನ್ಯ' ಕ್ಕೆ ಭಿನ್ನವಾದ 'ಸ್ತ್ರೀಶಕ್ತಿ'ಯ ಮಾದರಿಯದು. (ಪುಟ ೩೦೦)

ಹೀಗೆ ಸ್ತ್ರೀವಾದಿ ಚಿಂತನೆಯ ಸಾಂಸ್ಕೃತಿಕ ನೆಲೆಗಳನ್ನು ಶೋಧಿಸುವಲ್ಲಿ, ವಿಸ್ತರಿಸುವಲ್ಲಿ, ಅದನ್ನು ಗಟ್ಟಿಗೊಳಿಸುವಲ್ಲಿ, ಅಧಿಕೃತಗೊಳಿಸುವಲ್ಲಿ ಈ ಕೃತಿಗೆ ತನ್ನಿಂದ ತಾನೇ ಒಂದು ಚಾರಿತ್ರಿಕ ಮಹತ್ವ ಪ್ರಾಪ್ತವಾಗಿದೆ. ಒಂದು ಚಾರಿತ್ರಿಕ ಸತ್ಯದ ಪುನರ್ದರ್ಶನವಾಗಿ ಈ ಕೃತಿ ಹೊರಹೊಮ್ಮಿದೆ.

ಪುರುಷ ಚಿಂತನಕ್ರಮ ಹಾಗೂ ಪರಿಭಾಷೆಗಳಿಗಿಂತ ಭಿನ್ನವಾದ ಮಾರ್ಗದಲ್ಲಿ ಡಾ|| ಗಾಯತ್ರಿ ಅವರು ಕ್ರಮಿಸಿರುವುದು ಈ ಗ್ರಂಥದ ಹೆಚ್ಚುಗಾರಿಕೆ. ಮಹಿಳಾ ಜಗತ್ತನ್ನು ಅರ್ಥಮಾಡಿಕೊಳ್ಳುವಲ್ಲಿ ಅಶಾಬ್ದಿಕ ಆಕರಗಳು ಗುರುತರವಾದ ಕಾರ್ಯವನ್ನು ನಿರ್ವಹಿಸಬಲ್ಲದು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಹೀಗಾಗಿ ಸ್ತ್ರೀವಾದದ ಹೊಸ ವಿನ್ಯಾಸವನ್ನು ಸೂಚಿಸುವಲ್ಲಿ ಈ ಕೃತಿ ಯಶಸ್ವಿಯಾಗಿದೆ.ಇದು ಸಾಕಷ್ಟು ಪರಿಶ್ರಮದ

ಕ್ಷೇತ್ರಕಾರ್ಯದಿಂದ ರಚನೆಗೊಂಡದ್ದು. ಸಂಶೋಧನೆ ಕೇವಲ ಶೈಕ್ಷಣಿಕ ಕ್ರಿಯೆಯಾಗಬಾರದು ಎಂಬ ಎಚ್ಚರಿಕೆಯೂ ಇಲ್ಲಿ ಎದ್ದು ಕಾಣುತ್ತದೆ.

ಪುರುಷ ಪ್ರಧಾನ ಸಮಾಜ ಹೆಣ್ಣಿನ ಅನುಭವಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾದ ಅಗತ್ಯತೆಯನ್ನು ಈ ಕೃತಿ ಎತ್ತಿ ಹೇಳಿದೆ. ಸ್ತ್ರೀ ನೆಲೆಯಿಂದ ಜಗತ್ತನ್ನು, ಬದುಕನ್ನು ನೋಡುವ ಕ್ರಮವನ್ನು ಇಲ್ಲಿ ಲೇಖಕರು ಸೂಚಿಸಿ ದೃಷ್ಟಿ ತಿದ್ದುವ ಕಾರ್ಯವನ್ನೂ ಮಾಡಿದ್ದಾರೆ. ಪುರುಷ ಕೇಂದ್ರಿತ ಗ್ರಹಿಕೆಯ ಮಿತಿಗಳನ್ನು ಬೊಟ್ಟು ಮಾಡಿ ತೋರಿಸಿ ಹೆಣ್ಣು-ಗಂಡು ಪರಸ್ಪರ ವಿರುದ್ಧ ವ್ಯಕ್ತಿಗಳಲ್ಲ ಎಂಬುದನ್ನು ಈ ಪ್ರಬಂಧ ಸಾಬೀತು ಪಡಿಸಿದೆ. ಕರಾವಳಿಯ ಸ್ತ್ರೀ ಯಜಮಾನ ಸಂಸ್ಕೃತಿಯಲ್ಲಿ ಭೋಗದ ವಸ್ತುವಾಗಿ ಕರಗಿಹೋದವಳಲ್ಲ. ಅಲ್ಲಿನ ಮಾತೃರೂಪೀ ಸಂಸ್ಕೃತಿ ಹೆಣ್ಣಿಗೆ ಸ್ವಾತಂತ್ರ್ಯ ಹಾಗೂ ಗೌರವವನ್ನು ಗಳಿಸಿಕೊಟ್ಟಿತು. ಇತಿಹಾಸದ ಪುಟದಲ್ಲಿ ಇದೊಂದು ದಿಟ್ಟಹೆಜ್ಜೆ ಎಂಬ ವಿಚಾರಗಳತ್ತ ಲೇಖಕರು ಗಮನ ಸೆಳೆದಿದ್ದಾರೆ. ಜಾನಪದ ಆಕರಗಳಿಂದ ಇತಿಹಾಸದ ಪುನಾರಚನೆ ಹೇಗೆ ಆಗಬೇಕು ಎಂಬುದಕ್ಕೂ ಈ ಕೃತಿ ಮಾದರಿಯಾಗಿದೆ. ಜಾನಪದ ಆಕರಗಳನ್ನು ಅಲ್ಲಿನ ಸಾಮಾಜಿಕ ತತ್ವಗಳನ್ನು ನಮ್ಮ ವರ್ತಮಾನಕಾಲದ ಅನ್ಯಶಿಸ್ತುಗಳೊಂದಿಗೆ ಮುಖಾಮುಖಿಗೊಳಿಸುವ ವಿಧಾನವೂ ಇಲ್ಲಿ ಅರ್ಥಪೂರ್ಣವಾಗಿ ನೆರವೇರಿದೆ. ಅಧ್ಯಯನದ ಜಡ ಒತ್ತಾಯಗಳನ್ನು ಮೀರಿ, ತುಳಿದ ದಾರಿಯನ್ನು ಬಿಟ್ಟು ಸೃಜನಶೀಲ ಅನ್ವೇಷಣೆ, ವಿಶ್ಲೇಷಣೆಗಳಿಂದ ಕೂಡಿ ಈ ಕೃತಿ ಪ್ರಗಲ್ಭವಾಗಿದೆ. ನಮ್ಮ ಸಾಂಸ್ಕೃತಿಕ ಚರಿತ್ರೆಯಲ್ಲಿನ ಅನೇಕ ಸಂದೇಹ, ಅನುಮಾನಗಳಿಗೂ ಇಲ್ಲಿ ಸಂಶೋಧಕರು ಉತ್ತರವನ್ನು ಕಂಡುಕೊಳ್ಳುತ್ತಾ ನಡೆದಿದ್ದಾರೆ. ಪಶ್ಚಿಮಮುಖಿ ಚಿಂತನೆಗಳಿಗಿಂತ ದೇಶೀ ನೆಲೆಯಲ್ಲಿ ನಮ್ಮ ಜಾನಪದ ಸಮಾಜಗಳ ನಡುವೆ ನಿಂತು ಹೊಸ ನುಡಿಗಟ್ಟಿನಲ್ಲಿ ಬೌದ್ಧಿಕ ಕ್ರಾಂತಿಯನ್ನು ಇಲ್ಲಿ ಡಾ|| ಗಾಯತ್ರೀ ನಾವಡ ಅವರು ಹುಟ್ಟುಹಾಕಿದ್ದಾರೆ.

"ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ ನಿಂದ ಹೆಜ್ಜೆಯನರಿಯಲಾಗದು" ಎಂದಿದ್ದಾನೆ ಅಲ್ಲಮಪ್ರಭು. ನಮ್ಮ ಪರಂಪರೆಯಲ್ಲಿ ಶತಮಾನಗಳ ಹಿಂದಿನ ಹೆಣ್ಣುಮಕ್ಕಳ ಛಲ, ಎಚ್ಚರ, ವಿವೇಕ, ಆಕಾಂಕ್ಷೆ ಹಾಗೂ ಬದುಕಿನ ಸುಳಿಯಲ್ಲಿ ಮುಳುಗೆದ್ದು ಸ್ತ್ರೀ-ಸಂಸ್ಕೃತಿಯನ್ನು ರೂಪುಗೊಳಿಸಿದ ಬಗೆಯನ್ನು ಈ ಮಹಾಪ್ರಬಂಧ ಚೆನ್ನಾಗಿ ಅನಾವರಣಗೊಳಿಸಿದೆ. ಅಲ್ಲದೆ ನಮ್ಮ ದೇಶೀ ಸಂಪ್ರದಾಯದ ಸತ್ವ ಹಾಗೂ ಸಾಮರ್ಥ್ಯವನ್ನು ಎತ್ತಿಹಿಡಿದಿದೆ. ಒಟ್ಟಿನಲ್ಲಿ ಇದೊಂದು ಅಪೂರ್ವವಾದ, ಹೊಸತನವನ್ನು ಪಡೆದಿರುವ - ಸಂಶೋಧನ ಕೃತಿಯಾಗಿದೆ.

**- ಡಾ|| ಜಿ. ಎನ್. ಉಪಾಧ್ಯ**

# ಗ್ರಂಥ ವಿಮರ್ಶೆ

## ಹೊರನಾಡಿನ ಕರ್ನಾಟಕ ರಾಜ್ಯಗಳು - ಒಂದು ವಿಮರ್ಶೆ

ಎ. ಎಸ್. ನಟರಾಜ್ ಬರೆದಿರುವ 'ಹೊರನಾಡಿನ ಕರ್ನಾಟಕ ರಾಜ್ಯಗಳು' ನೂರೆಂಟು ಪುಟಗಳಲ್ಲಿ ಮೂಡಿಬಂದಿರುವ ಚಿಕ್ಕ - ಚೊಕ್ಕ ವೈಶಿಷ್ಟ್ಯಪೂರ್ಣ ಗ್ರಂಥ. ಮಿಥಿಲಾದ ಕರ್ನಾಟಕ ರಾಜ್ಯ, ಬಂಗಾಳದಲ್ಲಿ ಸೇನರ ರಾಜ್ಯ ಮತ್ತು ತಮಿಳುನಾಡಿನಲ್ಲಿ ಹೊಯ್ಸಳರ ರಾಜ್ಯ - ಇವೇ ಮೂರು ಹೊರನಾಡಿನ ಕರ್ನಾಟಕ ರಾಜ್ಯಗಳು. ಲೇಖಕರು ಈ ಗ್ರಂಥದಲ್ಲಿ ಮಿಥಿಲಾದಲ್ಲಿ ರಾಜಧಾನಿ ಸಿಂಹರಾಯಘಡ (ನೇಪಾಲದಲ್ಲಿ), ಬಂಗಾಳದಲ್ಲಿ ಸೇನರ ರಾಜಧಾನಿ ನವದ್ವೀಪ (ನದಿಯಾ) ಮತ್ತು ತಮಿಳುನಾಡಿನಲ್ಲಿ ಹೊಯ್ಸಳ ರಾಜಧಾನಿ ಕಣ್ಣಾನೂರುಗಳಿಗೆ ತಾವು ಕೈಗೊಂಡ ಪ್ರವಾಸ ಅನುಭವಗಳನ್ನೂ ಹಾಗೂ ತಾವು ಕಂಡ ಐತಿಹಾಸಿಕ ಅವಶೇಷಗಳ ವಿವರಗಳನ್ನೂ ಹಾಗೂ ಮೂರು ರಾಜವಂಶಗಳ ರಾಜರ ಐತಿಹಾಸಿಕ ಅವಶೇಷಗಳ ವಿವರಗಳನ್ನೂ ಹಾಗೂ ಮೂರು ರಾಜವಂಶಗಳ ರಾಜರ ಆಳ್ವಿಕೆಯ ಕಾಲನಿರ್ದೇಶ, ವಂಶವೃಕ್ಷ, ಆಡಳಿತ ವ್ಯವಸ್ಥೆ, ಧರ್ಮ, ಕಲೆ, ಸಾಹಿತ್ಯ ಮುಂತಾದ ಸಾಂಸ್ಕೃತಿಕ ಸಾಧನೆಗಳು, ಸಾಮಾಜಿಕ ಆರ್ಥಿಕ ವ್ಯವಸ್ಥೆ ಇವೆಲ್ಲದರ ಬಗ್ಗೆ ಮಾಹಿತಿಯನ್ನು ಆಧಾರಗಳ ಸಹಿತವಾಗಿ ನೀಡಿರುವುದು ಗ್ರಂಥದ ಮಹತ್ವವನ್ನು ಹೆಚ್ಚಿಸಿದೆ.

ಮಿಥಿಲಾ, ಬಂಗಾಳದ ಸೇನರು, ತಮಿಳುನಾಡಿನಲ್ಲಿ ಹೊಯ್ಸಳರು ಎಂಬ ಮೂರು ಶೀರ್ಷಿಕೆಗಳಲ್ಲಿ ಹೊರನಾಡಿನ ಕರ್ನಾಟಕ ರಾಜ್ಯಗಳ ಬಗ್ಗೆ ವಿವೇಚಿಸಲಾಗಿದೆ. ಮೂರೂ ರಾಜವಂಶಗಳ ಬಗ್ಗೆ ವಿವೇಚನೆ ಪೀಠಿಕೆಯಿಂದ ಪ್ರಾರಂಭಗೊಳ್ಳುತ್ತದೆ. ಪೀಠಿಕೆಯಲ್ಲಿ ಗ್ರಂಥಕರ್ತರು ಕ್ಷೇತ್ರ ಸಂದರ್ಶನದ ವಿವರಗಳನ್ನು ಒದಗಿಸಿದ್ದಾರೆ. ಮಿಥಿಲೆಯ ಕರ್ನಾಟಕ ರಾಜವಂಶದ ಬಗ್ಗೆ ಏಳು ಅಧ್ಯಾಯಗಳೂ, ಬಂಗಾಳದ ಸೇನರ ಬಗ್ಗೆ ಮೂರು ಅಧ್ಯಾಯಗಳೂ, ತಮಿಳುನಾಡಿನ ಹೊಯ್ಸಳರ ಬಗ್ಗೆ ಒಂದು ಅಧ್ಯಾಯವೂ ಇದ್ದು ಒಂದೊಂದು ರಾಜವಂಶದ ಕಥನದ ಕೊನೆಯಲ್ಲಿ ಆಧಾರಗ್ರಂಥಗಳ ಪಟ್ಟಿಯನ್ನೂ ಮತ್ತು ಪ್ರಮುಖ ಐತಿಹಾಸಿಕ ಸ್ಮಾರಕಾವಶೇಷಗಳ ಛಾಯಾಚಿತ್ರಗಳನ್ನೂ ಕೊಡಲಾಗಿದೆ.

ಈ ಗ್ರಂಥದಲ್ಲಿ ಪ್ರಸ್ತಾಪಿಸಲ್ಪಟ್ಟ ಕೆಲವು ಗಮನಾರ್ಹ ಅಂಶಗಳು ಇಂತಿವೆ. ಮೊದಲ ಅಧ್ಯಾಯದಲ್ಲಿ ಮಿಥಿಲಾದ ಇತಿಹಾಸವನ್ನು ವೇದದ ಕಾಲದಿಂದ ಅದರ ಪ್ರಥಮ ರಾಜ ವಿದೇಹ ಮಾಧವನಿಂದ ಪ್ರಾರಂಭಿಸಿ ಕ್ರಿ.ಶ. ೧೦೯೭ರಲ್ಲಿ ಕರ್ನಾಟಕ ವಂಶಜರಾದ ನಾನ್ಯದೇವನಿಂದ ರಾಜ್ಯಸ್ಥಾಪನೆಯವರೆಗೆ ಕೊಡಲಾಗಿದೆ. ಎರಡನೇ ಅಧ್ಯಾಯದಲ್ಲಿ ನೇಪಾಳದ ವಂಶಾವಳಿಗಳನ್ನು ಆಧರಿಸಿ ನಾನ್ಯದೇವನು ಅಂತಃಕಲಹಗಳಿಂದ ಜರ್ಜರಿತವಾಗಿದ್ದ ನೇಪಾಳವನ್ನು ಆಕ್ರಮಿಸಿ, ಭಟಗಾಂವ್‌ದಲ್ಲಿ ತನ್ನ ಆಧಿಪತ್ಯವನ್ನು ಸ್ಥಾಪಿಸಿ ಕಠಮಂಡು ಕಣಿವೆಯನ್ನು ಆಳತೊಡಗುತ್ತಾನೆ. ಇದರಿಂದಾಗಿ ನೇಪಾಳದಲ್ಲಿ ಆಳುತ್ತಿದ್ದ ಪಾಲರ ವಂಶ ಕ್ಷೀಣಗೊಂಡು ಅವಸಾನಗೊಳ್ಳುತ್ತದೆ. ಸಿಂಹರಾಯನಗಢವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅದನ್ನು ಬಲವಾದ ಕೋಟೆಗಳಿಂದ ಭದ್ರಪಡಿಸಿದನು. ಭರತ ಮುನಿಯ ನಾಟ್ಯಶಾಸ್ತ್ರದ ಮೇಲೆ ಉತ್ತಮ 'ಸರಸ್ವತೀ ಹೃದಯಾಂಕಾರಹಾರ' ಎಂಬ ಪ್ರಬಂಧವನ್ನು ರಚಿಸಿದ್ದಾನೆ. ಇವನ ಉತ್ತಮ ಆಡಳಿತದಿಂದಾಗಿ ಉತ್ತರ ಬಿಹಾರ ಎಲ್ಲ ಕ್ಷೇತ್ರಗಳಲ್ಲೂ ಮುಂದುವರೆಯಿತು ಎಂದು ನಾನ್ಯದೇವನ ಬಗ್ಗೆ ಪ್ರಶಂಸಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ನಾನ್ಯದೇವನ ಮಗ ಗಂಗದೇವನ ಬಗ್ಗೆ ಹೇಳಲಾಗಿದೆ. ಪ್ರಸಿದ್ಧ ಪಂಚಾಯಿತಿ ಪದ್ಧತಿಯನ್ನು ಪ್ರಾರಂಭಿಸಿದವನು ಇವನೇ, ದರ್ಭಾಂಗ್

ಪಟ್ಟಣಕ್ಕೆ ತನ್ನ ರಾಜಧಾನಿಯನ್ನು ಸ್ಥಳಾಂತರಿಸಿದವನೂ ಇವನೇ ಎಂದೂ ಹೇಳಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ನಾನ್ಯದೇವನ ಮೊಮ್ಮಗ ನರಸಿಂಹನ ನರಸಿಂಹದೇವನ ಆಳ್ವಿಕೆಯಲ್ಲಿ ನೇಪಾಳವು ಮಿಥಿಲೆಯ ಜೊತೆಗೆ ತನ್ನ ಸಂಬಂಧವನ್ನು ಕಡಿದುಕೊಂಡು ಮಲ್ಲರ ಆಳ್ವಿಕೆಗೆ ಒಳಪಟ್ಟಿತೆಂದೂ ಪರಿಣಾಮವಾಗಿ ಮಿಥಿಲಾ ಒಂದು ಸಣ್ಣ ರಾಜ್ಯವಾಯಿತೆಂದೂ ಆದರೆ ತುರುಕರ ರಾಜ್ಯದಾಹಕ್ಕೆ ಒಳಗಾಗದೆ ತನ್ನನ್ನು ಸಮರ್ಥವಾಗಿ ರಕ್ಷಿಸಿಕೊಂಡಿತೆಂದೂ ಹಾಗೂ ಮೈಥಿಲೀ ಭಾಷೆಯ ಬೆಳವಣಿಗೆ ಪಡೆಯಿತು ಎಂದೂ ತಿಳಿಸಲಾಗಿದೆ. ಐದನೇ ಅಧ್ಯಾಯದಲ್ಲಿ ರಾಮನರಸಿಂಹರಾಯನ ಆಳ್ವಿಕೆಯಲ್ಲಿ ನಡೆದ ತುರುಕರ ಮತ್ತು ನೇಪಾಳ ದೊರೆಗಳ ಆಕ್ರಮಣ ವಿರುದ್ಧ ಸಿಂಹರಾಯಗಡ ರಕ್ಷಿತಗೊಂಡಿತೆಂದೂ, ಸಂಸ್ಕೃತ ಸಾಹಿತ್ಯ ಬೆಳವಣಿಗೆ ಕಂಡಿತೆಂದೂ, ರಾಮಾದಿತ್ಯ-ಕರ್ಮಾದಿತ್ಯ ಇಬ್ಬರು ಇವನ ಆಸ್ಥಾನದ ಪ್ರಬಲ ಅಮಾತ್ಯರೆಂದೂ ಹೇಳಲಾಗಿದೆ. ಆರನೆಯ ಅಧ್ಯಾಯದಲ್ಲಿ ನೇಪಾಳದ ವಂಶಾವಳಿಗಳು ನೀಡಿರುವ ಕರ್ನಾಟಕ ರಾಜವಂಶದ ಕಾಲ ನಿಷ್ಕರ್ಷೆಯನ್ನು ಪ್ರಸ್ತುತಗೊಳಿಸುತ್ತದೆ. ಕ್ರಿ.ಶ. ೧೦೯೭ ನಾನ್ಯದೇವ ಸಿಂಹಾಸನಾರೂಢನಾದ; ೧೧೪೭-೧೧೮೮ ಗಂಗದೇವ ಮತ್ತು ಮಲ್ಲದೇವರ ಆಳ್ವಿಕೆ; ೧೨೮೫ ಭಾವಸಿಂಹದೇವ, ಕರ್ಮಸಿಂಹದೇವರ ಆಳ್ವಿಕೆ ಹಾಗೂ ೧೨೮೫-೧೩೨೪ರವರೆಗೆ ಕೊನೆಯ ದೊರೆ ಹರಿಸಿಂಹದೇವನ ಆಳ್ವಿಕೆ. ಏಳನೆಯ ಅಧ್ಯಾಯದಲ್ಲಿ ಮಿಥಿಲೆಯಲ್ಲಿ ಕರ್ನಾಟಕ ವಂಶದ ಉತ್ತರ ಭಾರತದ ಕಡೆಯ ಪ್ರಬಲ ದೊರೆ ಹರಿಸಿಂಹದೇವನ ಆಳ್ವಿಕೆಯಲ್ಲಿ ಕೈಗೊಳ್ಳಲಾದ ಸಾಮಾಜಿಕ ಸುಧಾರಣೆ, ಬ್ರಾಹ್ಮಣ, ಕಾಯಸ್ಥರ ವಂಶವೃಕ್ಷ ಪಂಜೀಕರಣ ಪದ್ಧತಿಯ ಜಾರಿ, ಭಟಗಾಂವ್‌ನಲ್ಲಿ 'ತಲೆ' ಎಂಬ ನಿಗೂಢ ದೇವತೆಯ ಮಂದಿರದ ಸ್ಥಾಪನೆ ಪ್ರಸ್ತಾಪದ ಜೊತೆಗೆ ಆಡಳಿತ ವ್ಯವಸ್ಥೆ, ಸಾಹಿತ್ಯ ಭಾಷೆಗಳ ಪ್ರಗತಿಗೆ ಈ ರಾಜವಂಶದವರ ಕೊಡುಗೆಗಳ ವಿವರಗಳನ್ನೂ ಪ್ರಸ್ತಾಪಿಸಲಾಗಿದೆ. ನಾನ್ಯದೇವನು ದೇಸೀ ರಾಗಗಳೆಂದು ಸುಮಾರು ೧೬೦ ರಾಗಗಳನ್ನು ತನ್ನ ಸ್ವದೇಶ ಕರ್ನಾಟಕ ದೇಶೀ ರಾಗಗಳಿಂದ ಆರಿಸಿ ಕೊಟ್ಟಿದ್ದಾನೆ.

ಈ ಗ್ರಂಥದಲ್ಲಿ ಪ್ರಸ್ತಾಪಗೊಂಡಿರುವ ಎರಡನೇ ಕರ್ನಾಟಕ ರಾಜ್ಯ ಬಂಗಾಲದ ನಬೋದ್ವೀಪವನ್ನಾಳಿದ ಸೇನರದು. ಮಾಯಾಪುರ (ಚೈತನ್ಯ ಮಹಾಪ್ರಭುವಿನ ಜನ್ಮಸ್ಥಳ)ದಿಂದ ಎರಡು ಕಿ.ಮೀ. ದೂರದಲ್ಲಿರುವ ಬಲ್ಲಾಳ ಧಿಬೀ ಮತ್ತು ಬಲ್ಲಾಳ ಡಿಘೀಯಲ್ಲಿ ಬಲ್ಲಾಳ ಸೇನನ ಅರಮನೆಯ ಅವಶೇಷಗಳು, ಕಂದಕ ಕೋಟೆಗಳನ್ನು ನೋಡಿ ಪಡೆದ ಲೇಖಕರ ಅನುಭವಗಳ ಬಗ್ಗೆ ಪೀಠಿಕೆಯಲ್ಲಿ ಹಾಗೂ ಮೂರು ಅಧ್ಯಾಯಗಳಲ್ಲಿ ಸೇನರ ವಂಶ ಕರ್ನಾಟಕದ ವಂಶವೆಂಬುದಕ್ಕೆ ದೇವಪಾರಾ ಶಾಸನ ಮತ್ತು ಬ್ಯಾರಕ್‌ಪುರ್, ಮಾಧೈನಗರ್ ತಾಮ್ರ ಶಾಸನಗಳಿಂದ ಪುರಾವೆಗಳು. ಈ ಕರ್ನಾಟಕ ಕ್ಷತ್ರಿಯ ವಂಶದವರು ಕರ್ನಾಟಕದಿಂದ ಬಂಗಾಳಕ್ಕೆ ಹೇಗೆ, ಯಾಕೆ, ಯಾವಾಗ ಬಂದರು ಎಂಬ ಬಗ್ಗೆ ವಿದ್ವಾಂಸರ ಅಭಿಪ್ರಾಯವಾದಗಳನ್ನು ಕೊಡಲಾಗಿದೆ. ಈ ವಂಶದ ಮೂಲಪುರುಷ ಸಾಮಂತಸೇನ, ಮೊದಲ ಪ್ರಮುಖ ದೊರೆ ವಿಜಯಸೇನನ ದಿಗ್ವಿಜಯಗಳು, ವಿಜಯಸೇನನ ಮಗ ವಿದ್ವಾಂಸ ದೊರೆಯಾದ ಬಲ್ಲಾಳಸೇನ (ದಾನಸಾಗರ, ಅಭೂತಸಾಗರ ಕೃತಿಗಳ ಕರ್ತೃ) ಹಾಗೂ ಬಲ್ಲಾಳ ಸೇನನ ಮಗ ಲಕ್ಷ್ಮಣಸೇನ ಅವನು ಹೊರಡಿಸಿದ ಗೋವಿಂದಪುರ, ಬಾಕುಲಲತಾ (ಸುಂದರಬನ) ಶಕ್ತಿಪುರ ಭೂಪಾಲ್ ಶಾಸನಗಳ ಬಗ್ಗೆ ಪ್ರಸ್ತಾಪವಿದೆ. ಉಪಸಂಹಾರ ಭಾಗದಲ್ಲಿ ಸೇನರ ಆಳ್ವಿಕೆಯಲ್ಲಿ ಬಂಗಾಳದಲ್ಲಿ ಹರಡಿದ ಕರ್ನಾಟಕ ಸಂಸ್ಕೃತಿಯ ಕಂಪು ಸೌರಭವನ್ನು ಕುರಿತಂತೆ ತಿಳಿಸಲಾಗಿದೆ.

ಬಲ್ಲಾಳ ಸೇನನ ಆಳ್ವಿಕೆಯಲ್ಲಿ ರಾಜ್ಯವಿಸ್ತರಣೆಗಾಗಿ ರಾಜ್ಯದ ಧನಿಕ ವಣಿಕ ಮುಖಂಡ ವಲ್ಲಭಾನಂದನಿಂದ ಬಲ್ಲಾಳಸೇನನು ಸಾಲ ಕೇಳಿದಾಗ ವಲ್ಲಭನು ಹರಿಕೇರಿ ಪ್ರದೇಶದ ಆದಾಯವನ್ನು ತನಗೆ ಬಿಟ್ಟುಕೊಡಬೇಕೆಂಬ ಪಣ ಒಡ್ಡುತ್ತಾನೆ. ಇದರಿಂದ ಕ್ರೋಧಗೊಂಡ ಬಲ್ಲಾಳಸೇನ ವಣಿಕರನ್ನು ಸಾಮಾಜಿಕವಾಗಿ ಶೂದ್ರಸ್ಥಾನಕ್ಕಿಳಿಸಿದಾಗ ವಣಿಕರು ಎಲ್ಲ ಸೇವಕ ಗುಲಾಮರನ್ನು ತಮ್ಮ ವಂಶಕ್ಕೆ ತೆಗೆದುಕೊಳ್ಳುತ್ತಾರೆ. ಅದರಿಂದ ಬಲ್ಲಾಳಸೇನನು ಕೈವರ್ತರೆಂಬ ಹೀನ ಕುಲದವರನ್ನು ಶೂದ್ರಸ್ಥಾನಕ್ಕೇರಿಸಿ ಅವರ ಮುಖಂಡ ಮಹೇಶನಿಗೆ ಮಹಾಮಾಂಡಲಿಕ ಪದವಿ ನೀಡುತ್ತಾನೆ. ಸವರ್ಣ ವಣಿಕರು ರಾಜನ ಈ ಕ್ರಮದಿಂದ ರಾಜ್ಯವನ್ನು ಬಿಟ್ಟು ಬೇರೆ ದೇಶಗಳಿಗೆ ವಲಸೆ ಹೋದರು.

ಲಕ್ಷ್ಮಣಸೇನ ಗೌಡ (ಉ. ಬಂಗಾಳ) ಕಾಮರೂಪ (ಅಸ್ಸಾಂ), ಕಳಿಂಗ (ದ. ಒರಿಸ್ಸಾ) ರಾಜ್ಯಗಳ ಮೇಲೆ ಜಯ ಸಾಧಿಸಿ ಕೀರ್ತಿಸ್ತಂಭಗಳನ್ನು ಪುರಿ, ಕಾಶಿ, ಪ್ರಯಾಗಗಳಲ್ಲಿ ನಿಲ್ಲಿಸಿದ. ಈಗಲೂ ಮಿಥಿಲೆಯಲ್ಲಿ ಪಾಲಿಸುತ್ತಿರುವ ಲಕ್ಷ್ಮಣ ಸಂವತ್ಸರ ಲಕ್ಷ್ಮಣಸೇನನ ಹೆಸರಿನಲ್ಲಿ ಪ್ರಚಲಿತವಾಗಿರುವ ಸಂವತ್ಸರವೇ ಆಗಿದೆ. ಲಕ್ಷ್ಮಣಸೇನನನ್ನು ನಭೋದ್ವೀಪದಿಂದ ಮೊಹಮದ್ ಭಕ್ತಿಯಾರ್ ಖಿಲ್ಜಿ ಓಡಿಸಿದನು. ನಂತರ ಪೂರ್ವಬಂಗಾಳದಲ್ಲಿ ಬಂದು ನೆಲೆಸಿದ ಲಕ್ಷ್ಮಣಸೇನನು ನಾಲ್ಕು ವರ್ಷಗಳ ಕಾಲ ೧೨೦೫ರವರೆಗೆ ಆಳಿದನು. ಕೊನೆಯ ಸೇನರಾಜರು ಕೇಶವಸೇನ, ವಿಶ್ವರೂಪಸೇನರು ಬಲ್ಲಾಳಸೇನನ ಮಕ್ಕಳು ಮುಸಲ್ಮಾನರ ಆಕ್ರಮಣಗಳಿಗೆ ತುತ್ತಾದುದರಿಂದ ಸೇನರ ಆಳ್ವಿಕೆ ಅಂತ್ಯಗೊಂಡಿತು. ಲಕ್ಷ್ಮಣಸೇನನ ಅಸ್ಥಾನದ ಕವಿ 'ಗೀತಗೋವಿಂದ' ಕರ್ತೃವಾದ ಜಯದೇವ. ಮುಖ್ಯ ನ್ಯಾಯಾಧೀಶನಾಗಿದ್ದವನು ಹಲಾಯುಧ. ವಿಜಯಸೇನನು ಪದುವೂಶಹರ್‌ನಲ್ಲಿ ಪ್ರದ್ಯುಮ್ನೇಶ್ವರ ದೇವಸ್ಥಾನವನ್ನು ಗೌಡದೊರೆ ಮದನಪಾಲನನ್ನು ಸೋಲಿಸಿ ಗೆದ್ದ ವಿಜಯೋತ್ಸವ ಆಚರಣೆಯ ರೂಪದಲ್ಲಿ ನಿರ್ಮಿಸಿದನು.

'ತಮಿಳುನಾಡಿನಲ್ಲಿ ಹೊಯ್ಸಳರು' ಗ್ರಂಥಕರ್ತರು ಪ್ರಸ್ತಾಪಿಸಿರುವ ಮೂರನೆಯ ಕರ್ನಾಟಕ ರಾಜ್ಯ. ಪೀಠಿಕೆಯಲ್ಲಿ ಯಥಾಪ್ರಕಾರ ಲೇಖಕರು ಕಣ್ಣಾನೂರನ್ನು ಹುಡುಕಿ ನೋಡಿ ಅಲ್ಲಿದ್ದ ಹೊಯ್ಸಳಾವಶೇಷಗಳನ್ನು ಕುರಿತು ಬರೆದಿದ್ದಾರೆ. ಒಂದೇ ಅಧ್ಯಾಯದಲ್ಲಿಯೇ ಹೊಯ್ಸಳ ರಾಜ್ಯಸ್ಥಾಪನೆಯಿಂದ ವಿಜಯನಗರ ಸ್ಥಾಪನೆಯವರೆಗೆ ಹೊಯ್ಸಳ ವಂಶದ ರಾಜಕೀಯ ಇತಿಹಾಸವನ್ನು ಸಂಕ್ಷೇಪವಾಗಿ ತಿಳಿಸುವುದರ ಜೊತೆಗೆ ತಮಿಳು ರಾಜವಂಶಗಳಾದ ತಂಜಾವೂರಿನ ಚೋಳ ಮತ್ತು ಮಧುರೈ ಪಾಂಡ್ಯರೊಂದಿಗಿನ ಹೊಯ್ಸಳರ ಸಂಬಂಧಗಳು ಹಾಗೂ ಆಡಳಿತ ವ್ಯವಸ್ಥೆ, ಧರ್ಮ, ಕಲೆ, ಸಂಸ್ಕೃತಿಗೆ ಹೊಯ್ಸಳರ ಕೊಡುಗೆಗಳನ್ನು ಗುರುತಿಸಿದ್ದಾರೆ. ಕಣ್ಣಾನೂರು ಹೊಯ್ಸಳ ದೊರೆ ವೀರ ಸೋಮೇಶ್ವರ ದೊರೆ ಕಟ್ಟಿದ ರಾಜಧಾನಿ. ಶ್ರೀರಂಗದಿಂದ ಮದ್ರಾಸ್ ನಗರಕ್ಕೆ ಹೋಗುವ ಹೆದ್ದಾರಿಯಲ್ಲಿ ಸುಮಾರು ೧೫ ಕಿ.ಮೀ. ದೂರದಲ್ಲಿ ಪೆರಿಯವಲನ್ ನಾಲೆಯ ದಡದಲ್ಲಿದೆ. ಇದನ್ನು ಸೋಮೇಶ್ವರನು ವಿಕ್ರಮಪುರವೆಂದು ಕರೆದು ಒಂದು ಮೈಲಿ ಉದ್ದದ ಬಲಯುತ ಕೋಟೆಯನ್ನು ಕಟ್ಟಿಸಿದನು. ತನ್ನ ತಾಯಿ ಕಾಳಲಾದೇವಿಯ ಜ್ಞಾಪಕಾರ್ಥವಾಗಿ ಕಣ್ಣಾನೂರಿನಲ್ಲಿ ಪೊಯ್ಸಳೇಶ್ವರ ಗುಡಿಯನ್ನು ಕಟ್ಟಿಸಿ ದಾನ ನೀಡಿ ಶಾಸನವನ್ನು ಹಾಕಿಸಿದನು. ಶ್ರೀರಂಗಂ ದೇವಸ್ಥಾನದ ಐದನೆಯ ಪ್ರಾಕಾರದಲ್ಲಿ ಹೊಯ್ಸಳ ರಾಣಿ ರಮಾದೇವಿ ಶ್ರೀ ವೇಣುಗೋಪಾಲ ಗುಡಿಯನ್ನು ಕಟ್ಟಿಸಿದಳು. ವೀರ ಸೋಮೇಶ್ವರನು ತಿರುವನ್ನಾಕೋಯಿಲ್ ಜಂಬುಕೇಶ್ವರ ದೇವಾಲಯದ ಆವರಣದಲ್ಲಿ ಬಲ್ಲಾಳೇಶ್ವರ, ಪದುಮೇಶ್ವರ, ನರಸಿಂಹೇಶ್ವರ, ಸೋಮೇಶ್ವರ ಗುಡಿಗಳನ್ನು ಕಟ್ಟಿಸಿದನು. ದೇವಾಲಯಗಳೇ ಅಲ್ಲದೆ ಶೈವ ಮಠಗಳಾದ ಶ್ರೀರಂಗಂನ

ತಿರುವನ್ನಾಕೋಯಿಲ್ ಸಮೀಪದ ಸಂಗಮೇಶ್ವರ ದೇವಾಲಯಕ್ಕೆ ಸೇರಿದಂತೆ ಸಂಗಮದೇವರ ಮಠ, ತಿರುಪ್ಪರೈತುರೈಯ ಕಕ್ಕುನಾಯಕನ ಮಠ ತಿನ್ನವೇಲಿಯ ಮರುಪ್ಪನಾಡಿನ ವೀರ ಸೋಮೇಶ್ವರ ಮಂಗಳಂ ಮತ್ತು ಶಿವಾಯಂನ ಏಳುನೂರುವಂತಿರು ಮಠ,ಮಹಾ ಪ್ರಧಾನಿ ಸಿಂಗಯ್ಯ ದಂಡನಾಯಕ ತಿರುಪತಿಯಲ್ಲಿ ಕಟ್ಟಿಸಿದ ಶ್ರೀವೈಷ್ಣವ ಮಠ ಹೊಯ್ಸಳರ ನಿರ್ಮಿತಿಗಳಾಗಿವೆ. ಮಡಿಗೊಂಡನ್, ಕೊಳ್ಳೆಗಾಲ, ಉಧಮಕೋಟೆ, ಹೊಸೂರು, ಭಿನ್ನಮಂಗಲ- ಹೊಯ್ಸಳರ ಕಾವಲುಗಡಿಗಳ ಠಾಣೆಗಳಾಗಿದ್ದವು. ಶೆಟ್ಟಿಯೂರು, ಪೆರಿಯೂರು, ತಿರುಮಯ್ಯಮ್, ತಿರುಪತ್ತೂರಿನಿಂದ ತಂಗಿಯವರೆಗೆ ಕೋಟೆ ಕೊತ್ತಲಗಳ ಬೀಡುಗಳಾಗಿದ್ದವು; ಹೊಯ್ಸಳ ವೀರ ನರಸಿಂಹ ಚತುರ್ವೇದಿಮಂಗಲಂ (ತಿರುವನ್ನಾಕೋಯಿಲ್ ಸಮೀಪ), ಶ್ರೀ ಪೊಯ್ಸಳ ವೀರ ಸೋಮೇಶ್ವರ ಚತುರ್ವೇದಿ ಮಂಗಲಂ (ತಿರುನೆಲ್‌ವೇಲಿ ಸಮೀಪ) ಅಗ್ರಾಹಾರಗಳು ಹೊಯ್ಸಳರದಾಗಿದ್ದವು.

ಕರ್ನಾಟಕ ರಾಜವಂಶಗಳ ಬಗ್ಗೆ ಕಥನದ ನಂತರ ಆಯಾಯಾ ರಾಜವಂಶಗಳಿಗೆ ಸಂಬಂಧಿಸಿದಂತೆ ಆಧಾರ ಗ್ರಂಥಗಳ ಪಟ್ಟಿಯನ್ನು ಕೊಡಲಾಗಿದೆ ಹಾಗೂ ಸಿಂಹರಾಯಘಡದಲ್ಲಿನ ಕೆರೆ, ದೇವಸ್ಥಾನ, ನಬೋದ್ವೀಪ (ನದಿಯಾ) ದಲ್ಲಿನ ಬಲ್ಲಾಳಸೇನನ ಅರಮನೆಯ ಅವಶೇಷಗಳು; ಕಣ್ಣಾನೂರಿನಲ್ಲಿ ಹೊಯ್ಸಳೇಶ್ವರ ದೇವಾಲಯ, ಶ್ರೀರಂಗಂ ದೇವಸ್ಥಾನದಲ್ಲಿರುವ ಶ್ರೀ ವೇಣುಗೋಪಾಲ ಸ್ವಾಮಿ ಗುಡಿ ಇವುಗಳ ಛಾಯಾಚಿತ್ರಗಳನ್ನು ನೀಡಲಾಗಿದೆ.

ಈವರೆಗೆ ಹೇಳಿದ ಗ್ರಂಥಸ್ವರೂಪ ವಿವರಣೆಯಿಂದ ಈ ಗ್ರಂಥವನ್ನು ಅತ್ಯಂತ ಆಸಕ್ತಿದಾಯಕ ಐತಿಹಾಸಿಕ ಮಾಹಿತಿಯನ್ನೊದಗಿಸುವ ಗ್ರಂಥವೆಂದು ಪರಿಗಣಿಸಬಹುದಾಗಿದೆ. ಒಬ್ಬ ಬ್ಯಾಂಕಿನ ಉದ್ಯೋಗಿಯು ಬರೆದಿರುವ ಹವ್ಯಾಸಿ ಚಾರಿತ್ರಿಕ ಗ್ರಂಥವೆಂದು ನಮಗೆ ತಿಳಿದುಬರುವುದು ತಮ್ಮ ಶುಭಾಶಯ ಲೇಖನದಲ್ಲಿ ಕೆ.ಟಿ. ಪಾಂಡುರಂಗಿಯವರು ಮಾಡಿರುವ ಪ್ರಸ್ತಾಪದಿಂದ ಮಾತ್ರ. ಇತಿಹಾಸದ ವಿದ್ಯಾರ್ಥಿಗಳಿಗೆ ಕ್ಷೇತ್ರ ಸಂಶೋಧಕರಿಗೆ ಮಾರ್ಗದರ್ಶನ, ಪ್ರೇರಣೆಗಳೊದಗಿಸುವ ಅತ್ಯಮೂಲ್ಯ ಕೃತಿಯಾಗಿದೆ ಇದು. ಬರವಣಿಗೆ ಭಾಷೆ, ಶೈಲಿ ಎಲ್ಲವೂ ಸರಳ ಮತ್ತು ಆಕರ್ಷಕವಾಗಿದೆ. ಆದರೆ ಈ ಗ್ರಂಥದಲ್ಲಿ ಮೂರು ರಾಜವಂಶಗಳ ಕಥನಕ್ಕೆ ಸಮಾನವಾಗಿ ಸ್ಥಳಾವಕಾಶವನ್ನು ನೀಡಲಾಗಿಲ್ಲ. ಮಿಥಿಲೆಯ ಕರ್ನಾಟಕ ರಾಜವಂಶದ ಬಗ್ಗೆ ದೀರ್ಘವಾದ ನಿರೂಪಣೆಯಿದೆ. ಪ್ರತಿಯೊಬ್ಬ ರಾಜನಿಗೆ ಸಂಬಂಧಿಸಿದ ವಿಚಾರವನ್ನು ಪ್ರತ್ಯೇಕ ಅಧ್ಯಾಯಗಳಲ್ಲಿ ನೀಡಲಾಗಿದೆ. ರಾಜರ ಸಿಂಹಾಸನಾರೋಹಣದ ವರ್ಷ, ಆಳ್ವಿಕೆಯ ಕಾಲಗಣನೆ, ಉತ್ತರಾಧಿಕಾರಿತ್ವ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಆಧಾರ ಸಹಿತವಾಗಿ ಚರ್ಚೆ ನಡೆಸಲಾಗಿದೆ. ಇಂತಹ ಒಂದು ಚರ್ಚೆ, ಸ್ವಾಭಿಪ್ರಾಯ ಮಂಡನೆ ಸೇನರ ಬಗ್ಗೆಯಾಗಲೀ, ಹೊಯ್ಸಳರ ಬಗ್ಗೆಯಾಗಲೀ ಕಂಡುಬರುವುದಿಲ್ಲ. ಸೇನರು ಯಾವಾಗ ಯಾವ ಸಂದರ್ಭದಲ್ಲಿ ಬಂಗಾಳದಲ್ಲಿ ರಾಜ್ಯಸ್ಥಾಪನೆ ಮಾಡಿದರು ಎಂಬ ವಿಚಾರಸೂಕ್ತ ರೀತಿಯಲ್ಲಿ ನಿರೂಪಿಸಲ್ಪಟ್ಟಿದೆಯಾದರೂ ಮಿಥಿಲೆಯ ರಾಜರಿಗೆ ದೊರೆತಷ್ಟು ಪ್ರಾಶಸ್ತ್ಯ ಇವರಿಗೆ ದೊರೆತಿಲ್ಲವೆಂದೆನಿಸುತ್ತದೆ. ಇನ್ನು ತಮಿಳುನಾಡಿನ ಹೊಯ್ಸಳರ ಬಗ್ಗೆ ಕೇವಲ ಒಂದೇ ಅಧ್ಯಾಯದಲ್ಲಿ ಇಡೀ ರಾಜಕೀಯ ಇತಿಹಾಸ ಮತ್ತು ಸಾಧನೆಗಳನ್ನೂ ಆತುರಾತುರಾಗಿ ಸಂಕ್ಷಿಪ್ತವಾಗಿ ಹೇಳಿ ಮುಗಿಸಿದೆಯೆಂದೆನಿಸುತ್ತದೆ.

**- ಬೆಂ. ಶಾ. ಶ್ಯಾಮಲಾ ರತ್ನಕುಮಾರಿ**

# ಗ್ರಂಥಸಂಪಾದನ ಪರಿಭಾಷಾಕೋಶ

## ಹಸ್ತಪ್ರತಿಶಾಸ್ತ್ರ - ಗ್ರಂಥಸಂಪಾದನೆ ಇವುಗಳ ಪಾರಿಭಾಷಿಕ ಶಬ್ದಗಳ ನಿಘಂಟು

*- ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರೀ*

**ಅಕ್ಷರಚಣ**
a skilled scribe, a professional scribe
ಹಸ್ತಪ್ರತಿಗಳನ್ನು ಬರೆಯುವ ಅಥವಾ ಪ್ರತಿಮಾಡುವ ವೃತ್ತಿಲೇಖಕ .

**ಅಕ್ಷರಚುಂಚು**
ನೋಡಿ : ಅಕ್ಷರಚಣ

**ಅಕ್ಷರಜನನಿ**
A reed or pen
ಹಸ್ತಪ್ರತಿಯ ಬರೆವಣಿಗೆಗೆ ಅಥವಾ ನಕಲು ಮಾಡುವುದಕ್ಕೆ ಬಳಸುವ ಕಡ್ಡಿ ಅಥವಾ ಲೇಖನಿ.

**ಅಕ್ಷರಜೀವಕ (ಅಕ್ಷರಜೀವಿಕ)**
ನೋಡಿ : ಅಕ್ಷರಚಣ

**ಅಕ್ಷರಜೀವನ**
ನೋಡಿ : ಅಕ್ಷರಚಣ

**ಅಕ್ಷರತೂಲಿಕಾ**
brush like pen for writing
ಬರಹಕ್ಕೆ ಬಳಸುವ ಕುಂಚದಂತಹ ಲೇಖನಿ

**ಅಕ್ಷರಪಲ್ಲಟ**
anagrammatism
ಕವಿಪಾಠದ ಪದಗಳನ್ನೂ ಪದಪುಂಜಗಳನ್ನೂ ಸಂಯೋಜಿಸುವ ಅಕ್ಷರಗಳಲ್ಲಿ ಸ್ಥಾನವ್ಯತ್ಯಯ ವುಂಟಾಗಿ ಹೊಸ ಪದ ರಚನೆಯಾಗುವುದು; ವರ್ಣವ್ಯತ್ಯಯ.

**ಅಕ್ಷರಭಿತ್ತಿ**
a plain surface to write on
ಬರಹಕ್ಕೆ ಬಳಸುವ ಗರಿ, ಹಾಳೆ, ಹಲಗೆಯಂತಹ ಸಪಾಟಾದ ವಸ್ತು.

**ಅಕ್ಷರಭೂಮಿಕಾ**
ನೋಡಿ : ಅಕ್ಷರಭಿತ್ತಿ

**ಅಕ್ಷರಭ್ರಾಂತಿ**
confusion of letters
ಕವಿಪಠ್ಯದ ಲೇಖನ ಅಥವಾ ವಾಚನದಲ್ಲಿ ಒಂದು ಅಕ್ಷರ ಇನ್ನೊಂದು ಅಕ್ಷರವಾಗಿ ಸಾದೃಶ್ಯ ಮೊದಲಾದ ಕಾರಣಗಳಿಂದ ಕಾಣುವುದು ಅಥವಾ ಕೇಳುವುದು.

**ಅಕ್ಷರಮುದ್ರಾ**
abbreviation
ಬರಹದ ಪದ ರೂಪ ಮುಂತಾದುವನ್ನು ಸಂಕ್ಷೇಪಮಾಡಿ ಬರೆಯುವುದು.

**ಅಕ್ಷರಲೋಪ**
omission of a syllable
ಲಿಪಿಕಾರಸ್ಖಾಲಿತ್ಯಗಳಲ್ಲಿ ಒಂದು; ಸಾರ್ಥಕವಾದ ಕವಿಪಾಠದ ಶಬ್ದವೊಂದರಲ್ಲಿ ಒಂದು ಅಕ್ಷರ ಆಕಸ್ಮಿಕವಾಗಿ ಬಿಟ್ಟುಹೋಗುವ ಸ್ಖಾಲಿತ್ಯ.

**ಅಕ್ಷರಸ್ಖಾಲಿತ್ಯ**
scribal error
ಪಠ್ಯದ ಹಸ್ತಪ್ರತಿಯನ್ನು ಸಿದ್ಧಪಡಿಸುವಾಗ ಲಿಪಿಕಾರನು ತನ್ನ ಅಜ್ಞಾನ, ಅಶ್ರದ್ಧೆ, ಭ್ರಾಂತಿ, ಆಕಸ್ಮಿಕ ಈ ಕೆಲವು ಕಾರಣಗಳಿಂದ ಮಾಡುವ ತಪ್ಪುಗಳಲ್ಲಿ ಒಂದು.

**ಅಕ್ಷರಸ್ಥಾನವ್ಯತ್ಯಯ**
metathesis
ಪಠ್ಯದ ಶಬ್ದಗಳನ್ನು ಸಂಯೋಜಿಸಿರುವ ಅಕ್ಷರಗಳಲ್ಲಿ ಅರ್ಥ ಕೆಡದ ಹಾಗೆ ಅಥವಾ ಅರ್ಥ ಸಂಬಂಧವಿಲ್ಲದ ಹಾಗೆ ನಡೆಯುವ ಸ್ಥಾನದ ಬದಲಾವಣೆ.

**ಅಗರುಪತ್ರ**
a kind of yellow fragrant wood used for writing
ಬರೆವಣಿಗೆಗೆ ಬಳಸುವ ಅಗರುಮರದ ತೊಗಟೆ.

**ಅಗರುವಲ್ಕಲ**
ನೋಡಿ : ಅಗರುಪತ್ರ

**ಅಗ್ರ್ಯಪಾಠ**
best reading, preferable reading
ಗ್ರಂಥಸಂಪಾದನೆಯಲ್ಲಿ ಅಂಗೀಕರಿಸಬಹುದಾದ ಉತ್ತಮಪಾಠ.

**ಅಂಗೀಕೃತಪಾಠ**
traditional reading
ಹಸ್ತಪ್ರತಿಗಳು ಮತ್ತು ಬಾಹ್ಯಸಾಕ್ಷ್ಯಗಳು ಎರಡರಿಂದಲೂ ಪುಷ್ಟಿಗೊಂಡ ಪಾಠ

**ಅಜಿನ**
parchment
ತೊಗಲುಹಾಳೆ; ಅದರ ಮೇಲೆ ಬರೆದ ಹಸ್ತಪ್ರತಿ

**ಅಟ್ಟವಣೆ (ಅಟ್ಟವಣಿ)**
an improvised stand for placing a book
ವಾಚನಕ್ಕೆ ಅನುಕೂಲಿಸುವಂತೆ ಪುಸ್ತಕವನ್ನು ಇಟ್ಟುಕೊಳ್ಳುವ ಆಸನ ಅಥವಾ ಪಾದವುಳ್ಳ ಮಣೆ.

**ಅಟ್ಟವಣಕೋಲ್**
ನೋಡಿ : ಅಟ್ಟವಣ (ಅಟ್ಟವಣೆ)

**ಅತಸೀವಲ್ಕಲ**
bark of *atasi* tree
ಅಗಸೆಮರದ ತೊಗಟೆ

**ಅಧಿಕಪಾಠ**
interealated text; addition
ಲಿಪಿಕಾರನ ಚಾಪಲ್ಯ ಕಾರಣವಾಗಿಯೋ ಕೃತಿಕರ್ತೃವೇ ಪುನರವಲೋಕನ ಮಾಡಿ ಹೊಸದಾಗಿ ಸೇರಿಸಿದ ಕಾರಣದಿಂದಲೋ ಪ್ರತಿಲಿಪಿಮಾಡುವಾಗ ಹೆಚ್ಚಾಗಿ ಸೇರಿರುವ ಪಾಠ.

**ಅಧಿಕಮಾತ್ರಕ**
hypermetric
ಛಂದಸ್ಸಿನಲ್ಲಿ ಅಗತ್ಯಕ್ಕಿಂತ ಹೆಚ್ಚಿನ ಮಾತ್ರೆಯೋ ಅಕ್ಷರವೋ ಪಾದಗಳಲ್ಲಿ ಕಾಣಿಸಿಕೊಳ್ಳುವುದು.

**ಅಧಿಕಲಿಖಿತ**
adscript
ಪಂಕ್ತಿಗಳ ನಡುವೆ ಆಗಲಿ, ಮಗ್ಗುಲಲ್ಲಾಗಲಿ ಪಠ್ಯದೊಂದಿಗೆ ಬರಹದ ವೇಳೆ ಹೆಚ್ಚಾಗಿ ಸೇರುವ ಬರಹ.

**ಅಧಿಕೃತತೆ**
authenticity
ಭಿನ್ನಪಾಠವೊಂದು ಕವಿಪಾಠವೇ ಅಲ್ಲವೇ ಎನ್ನುವುದರ ನಿಷ್ಕರ್ಷೆ

**ಅಧಿಕೃತಪ್ರತಿ**
protected text
ಗ್ರಂಥಕರ್ತೃ, ಅವನ ಪ್ರತಿನಿಧಿ, ವಿದ್ವಾಂಸ, ರಾಜಪೋಷಣೆಯ ಪಂಡಿತ ಇವರಲ್ಲಿ ಯಾರಾದರೊಬ್ಬರ ಮೇಲ್ವಿಚಾರಣೆಯಲ್ಲಿ ನ್ಯೂನತೆಗೆ ಅವಕಾಶವಿಲ್ಲದ ಹಾಗೆ ಸಿದ್ಧವಾದ ಹಸ್ತಪ್ರತಿ; ಸಂರಕ್ಷಿತ ಪ್ರತಿ.

**ಅನಿವಾರ್ಯವ್ಯತ್ಯಾಸ**
unavoidable change
ಪಠ್ಯದ ಹಸ್ತಪ್ರತಿಯನ್ನು ಸಿದ್ಧಪಡಿಸುವಾಗ ನಿವಾರಿಸಲು ಸಾಧ್ಯವಿಲ್ಲದೆ ಆಗುವ ವ್ಯತ್ಯಾಸ

**ಅನುಕ್ರಮಣಿ**
index, classified list
ಪದಗಳ, ಪದ್ಯಗಳ, ಆಕರಗಳ, ವಿಶೇಷವಿಷಯಗಳ ಕ್ರಮಬದ್ಧವಾದ ಪಟ್ಟಿ; ಸೂಚಿ

**ಅನುಪಲಬ್ಧಹಸ್ತಪ್ರತಿ**
non-extant mss.
ಅಸ್ತಿತ್ವದಲ್ಲಿಲ್ಲದ, ಅಲಭ್ಯವಾದ ಅಥವಾ ನಷ್ಟವಾದ ಹಸ್ತಪ್ರತಿ.

ಅನುಸ್ಯೂತಲೇಖನ
scriptura continua
ಹಸ್ತಪ್ರತಿಗಳನ್ನು ಬರೆಯುವಾಗ ಪದ, ಪದಪುಂಜ ಅಥವಾ ವಾಕ್ಯಗಳ ಮಧ್ಯೆ ಸ್ಥಳವನ್ನೇ ಬಿಡದೆ ಸೇರಿಸಿ ಬರೆದಿರುವುದು; ಅವಿಚ್ಛಿನ್ನವಾದ ಬರೆವಣಿಗೆ.

ಅನೂಚಾನಪಾಠ
ನೋಡಿ: ಅಂಗೀಕೃತಪಾಠ

ಅಂತರಪತ್ರ
bookmark
ಓದು ನಿಲ್ಲಿಸಿದ ಪುಟವನ್ನು ತೋರಿಸುವ ಚರ್ಮಕಾಗದ ಮೊದಲಾದವುಗಳ ತುಂಡು

ಅಂತಸ್ಸಂಭಾವ್ಯತೆ
intrinsic probability
ಕವಿ ಹೀಗೆ ಬರೆದಿರಬಹುದು, ಹೀಗೆ ಬರೆದಿರಲಾರ ಎಂಬುದನ್ನು ಕೃತಿಪಠ್ಯದ ಸಂದರ್ಭದ ಆಶಯಕ್ಕೆ ಅನುಗುಣವಾಗಿ, ಭಾಷೆ ಶೈಲಿ ವ್ಯಾಕರಣ ಛಂದಸ್ಸುಗಳಿಗೆ ಅನುಗುಣವಾಗಿ ನಿರ್ಣಯಿಸುವುದು.

ಅಪಪಾಠ
erroneus reading; mislection
ತಪ್ಪುಬರೆವಣಿಗೆಯಿಂದಾದ ಪಾಠ; ದುಷ್ಟಪಾಠ

ಅಪಪಾಠಶುದ್ಧಿ
emendare
ಕವಿಪಾಠಕ್ಕೆ ಉಂಟಾಗಿರಬಹುದಾದ ತಪ್ಪು ತಡೆಗಳನ್ನು ಗುರುತಿಸಿ, ಪಾಠವಿಮರ್ಶೆಯ ವಿಧಾನಗಳಿಂದ ಅವನ್ನು ನಿವಾರಿಸುವುದು.

ಅಪೂರ್ಣಪುನರ್ಲೇಖನ
partial dittography
ಪೂರ್ಣಾಕ್ಷರಗಳಲ್ಲಿ ಸಂಯುಕ್ತಾಕ್ಷರ ಮೊದಲಾದವುಗಳಿಗೆ ಸಂಬಂಧಿಸಿದಂತೆ ಭಾಗಶಃ ಆಗುವ ಪುನರ್ಲೇಖನ.

ಅಬುದ್ಧಿಪೂರ್ವಕದೂಷಣ
mechanical error, accidental change
ಬರಹದಲ್ಲಿ ಕಣ್ಣು, ಕಿವಿಗಳ ಭ್ರಾಂತಿ, ಸ್ಮರಣಶಕ್ತಿಯ ದೌರ್ಬಲ್ಯ, ತಪ್ಪುತೀರ್ಮಾನ ಇವುಗಳಿಂದ ತಿಳಿಯದೆ ಆಗಿರುವ ವ್ಯತ್ಯಾಸ; ಆಕಸ್ಮಿಕವ್ಯತ್ಯಾಸ.

ಅಯುಕ್ತಪಾಠ
inappropriate reading
ಸರಿಹೋಗದ, ತೃಪ್ತಿನೀಡದ ಪಾಠ.

**ಅರ್ಧಸದೃಶಾಕ್ಷರಲೋಪ**
semi haplography
ಭಾಗಶಃ ಸದೃಶವಾದ ಎರಡು ಅಕ್ಷರಗಳು ಒಟ್ಟಿಗೆ ಬಂದಾಗ ಅವುಗಳಲ್ಲಿ ಒಂದು ಬರವಣಿಗೆಯಲ್ಲಿ ಬಿಟ್ಟುಹೋಗುವುದು.

**ಅಲಂಕೃತಹಸ್ತಪ್ರತಿ (ಸಚಿತ್ರಹಸ್ತಪ್ರತಿ)**
illuminated manuscript; illustrated manscript; decorated manuscript
ರೇಖಾಚಿತ್ರಗಳು, ವರ್ಣರಂಜಿತಚಿತ್ರಗಳು ಮತ್ತು ಲಿಖಿತಗಳು, ದಂತ ಮುಂತಾದುವನ್ನು ಹದ್ದಿಸಿದ ಅಲಂಕಾರಗಳು ಇವುಗಳಿಂದ ಕೂಡಿದ ಹಸ್ತಪ್ರತಿ

**ಅಲೇಖ**
a blank palm leaf; a cadjan leaf or leaves tied together for writing upon them
ಬರೆಯದ ಓಲೆ ಅಥವಾ ಬರವಣಿಗೆಗೆ ಸಿದ್ಧಮಾಡಿಕೊಂಡ ತಾಳೆಯೋಲೆಗಳ ಕಟ್ಟು.

**ಅವಗ್ರಹ**
mark of separation of component parts of a compound
ಸಮಾಸಪದಗಳ ಭಾಗಗಳನ್ನು ಪ್ರತ್ಯೇಕಿಸಿ ತೋರಿಸುವ ಸಂಕೇತ.

**ಅವಿಶ್ವಾಸಿಹಸ್ತಪ್ರತಿಗಳು**
codices deteriores
ವಿರಳವಾಗಿ ಮಾತ್ರ ಸಮರ್ಪಕವಾದ ಪಾಠಾಂತರಗಳು ದೊರೆಯುವ, ಸಾಮಾನ್ಯವಾಗಿ ವಿಶ್ವಾಸಾರ್ಹವಲ್ಲದ ಹಸ್ತಪ್ರತಿಗಳು; ಪಾಠಾಂತರಸಂಕಲನದಲ್ಲಿ ಉದ್ದಕ್ಕೂ ಬಳಸಲು ಯೋಗ್ಯವಲ್ಲದುವು.

**ಅವ್ಯವಸ್ಥಿತಹಸ್ತಪ್ರತಿ**
haphazard transmission
ಅಧಿಕೃತವಾದ ಏರ್ಪಾಡಿಲ್ಲದೆ ಬರೆಯಲ್ಪಟ್ಟ, ತಪ್ಪುಬರವಣಿಗೆಗೆ ಹೆಚ್ಚು ಅವಕಾಶವಿರುವ ಹಸ್ತಪ್ರತಿ

**ಅವ್ಯಾಕ್ರಿಯರೂಪ**
solecism
ವ್ಯಾಕರಣಶುದ್ಧಿ ಅಥವಾ ಶಿಷ್ಟಪ್ರಯೋಗವನ್ನು ಮೀರಿದ ಪ್ರಯೋಗ.

**ಅಸಾಂಪ್ರದಾಯಿಕಪಾಠ**
non traditional reading
ಸಂಪ್ರದಾಯಕ್ಕೆ ಹೊಂದಿಕೆಯಾಗದ ಪಾಠ.

**ಅಳಕ (< ಅಲೇಖ)**
ನೋಡಿ : ಅಲೇಖ

**ಆಕಸ್ಮಿಕವ್ಯತ್ಯಾಸ**
ನೋಡಿ : ಅಬುದ್ಧಿಪೂರ್ವಕದೂಷಣ



**ಆಗಂತುಕಪಾಠ**
imported reading
ಹಸ್ತಪ್ರತಿಗಳ ಆಧಾರದಿಂದ ಹೊರತಾದ ಮೂಲಗಳಿಂದ ತಂದು ಯೋಜಿಸಿದ ಪಾಠ

**ಆದರ್ಶಪುಸ್ತಕ**
exemplar
ನೇರವಾಗಿ ಪ್ರತಿಲಿಪಿಮಾಡಲು ಇಟ್ಟುಕೊಂಡ ಪರಂಪರಾಗತಹಸ್ತಪ್ರತಿ; ಮಾತೃಕೆ; ಆಧಾರ ಪ್ರತಿ.

**ಆಧಾರಪ್ರತಿ**
exemplar selected for editing to consititute the text; base
ಗ್ರಂಥಸಂಪಾದನೆಗೆ ಹೊರಡುವ ಮೊದಲು ಹಲವು ಉಪಲಬ್ಧ ಹಸ್ತಪ್ರತಿಗಳಲ್ಲಿ ಪ್ರಾಚೀನತೆ, ಪ್ರಾದೇಶಿಕತೆ, ಪರಿಶುದ್ಧತೆ ಇವನ್ನು ಮಾನದಂಡವಾಗಿ ಇಟ್ಟುಕೊಂಡು ಆರಿಸಿದ ಮಾತೃಕೆ.

**ಆರ್ಷಪಾಠ**
vedic or epic usage
ವೈದಿಕಸಾಹಿತ್ಯ ಅಥವಾ ಇತಿಹಾಸ ಪುರಾಣಗಳಲ್ಲಿ ದೊರೆಯುವ ಪಾಠ.

**ಆವೃತ್ತಿ**
version
ಪ್ರಧಾನ ಅಥವಾ ಉಪಪಾಠಸಂಪ್ರದಾಯದಿಂದ ಕವಲೊಡೆಯುವುದು.

**ಆಳಿ (ಆವಳಿ)**
line in a manscript passage
ಹಸ್ತಪ್ರತಿಯ ಬರಹದಲ್ಲಿ ಸಾಲು.

**ಇಷಿಕ**
a kind of reed used as pen
ಲೇಖನಿಯಂತೆ ಬಳಸುವ ಒಂದು ಬಗೆಯ ದಂಟು; ಲಾಳದ ಕಡ್ಡಿ.

**ಉಕ್ತಲೇಖಕ**
amanuensis
ಮತ್ತೊಬ್ಬರು ಹೇಳುತ್ತಿರುವಾಗ ಬರೆದುಕೊಳ್ಳುವವನು.

**ಉಚ್ಚಾರಲೋಪ**
elision
ಉಚ್ಚಾರಣೆಯಲ್ಲಿ ಸ್ವರವನ್ನಾಗಲಿ, ಪೂರ್ಣಾಕ್ಷರವನ್ನಾಗಲಿ ಬಿಟ್ಟುಬಿಡುವುದು.

**ಉದ್ದೇಶಪೂರ್ವಕವ್ಯತ್ಯಾಸ**
intentional change
ಬರಹದಲ್ಲಿ ಲಿಪಿಕಾರನು ಯಾವುದೋ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ಬೇಕೆಂದೇ ಮಾಡಿರುವ ವ್ಯತ್ಯಾಸ; ಚಿತ್ತದೋಷ.

**ಉದ್ಧೃತಪದ**
lemma (pl. lemmata)
ವ್ಯಾಖ್ಯಾನಕಾರನು ಪರಾಮರ್ಶೆಯ ಸಲುವಾಗಿ ಉದ್ಧರಿಸಿದ ಪದ್ಯ ಅಥವಾ ಪದ್ಯವಾಕ್ಯದ ಮೊದಲಲ್ಲಿ ಬರುವ ಶಬ್ದ.

**ಉನ್ನತವಿಮರ್ಶೆ**
higher criticism
ಕೃತಿಪರ‍್ಯಕ್ಕೆ ಸಂಬಂಧಿಸಿದ ನಾಲ್ಕನೆಯ ಹಂತ; ಕವಿ ಬಳಸಿರುವ ಪಾಠಸಾಮಗ್ರಿಯನ್ನು ಪ್ರತ್ಯೇಕಿಸಿ ತರ್ಕಬದ್ಧವಾಗಿ ಪೀಠಿಕೆಯ ಭಾಗದಲ್ಲಿ ನಿರೂಪಿಸುವುದು; ಕವಿಯ ಜೀವನಕಾಲಗಳ ವಿಚಾರ, ಪಠ್ಯದ ಮೂಲ ಆಕರಗಳು, ವಸ್ತುವಿಶ್ಲೇಷಣೆ, ಭಾಷೆ ಶೈಲಿಗಳು, ಉತ್ತರಕಾಲೀನ ಸಾಹಿತ್ಯದ ಮೇಲೆ ಪ್ರಭಾವ ಈ ಮೊದಲಾದ ವಿಚಾರಗಳ ಅಧಿಕೃತವಿಮರ್ಶೆ ಮತ್ತು ತರ್ಕಬದ್ಧ ಪ್ರತಿಪಾದನೆ.

**ಉಪಕ್ರಮ**
beginning of an entry in a descriptive catalogue of mss.
ವರ್ಣನಾತ್ಮಕ ಹಸ್ತಪ್ರತಿಸೂಚಿಯಲ್ಲಿ ಎತ್ತಿ ಬರೆಯುವ ಹಸ್ತಪ್ರತಿವಿವರಣೆಯ ಆರಂಭದ ಕೆಲವು ಪಂಕ್ತಿಗಳು

**ಉಪಪ್ರಧಾನಮಾತೃಕೆ (ಉಪಪ್ರಧಾನ ಆದರ್ಶ)**
hyparchetype ; hyparchetypus
ಪ್ರಧಾನಮಾತೃಕೆಯ ಪಾಠಸಂಪ್ರದಾಯಗಳಲ್ಲಿ ಪಾಠದಲ್ಲಿ ಐಕ್ಯವೋ ಭಿನ್ನತೆಯೋ ಕಂಡುಬರುವ ಒಂದು ಅಥವಾ ಹಲವು ಭಿನ್ನಪಾಠವಾಹಕ ಹಸ್ತಪ್ರತಿ/ ಹಸ್ತಪ್ರತಿಗಳು; ಪಾಠಸಂಪ್ರದಾಯವೊಂದರ ಕವಲಾದ ಪರಂಪರಾಗತಹಸ್ತಪ್ರತಿಯ ವಿಭಿನ್ನಶಾಖೆಗಳಲ್ಲಿ ಒಂದಕ್ಕೆ ತಾನೇ ಸೇರಿದ್ದರೂ ತಾನೂ ಒಂದು ಶಾಖೆಗೆ ಮೂಲವಾದ ಮಾತೃಕೆ.

**ಉಪಲಬ್ಧಹಸ್ತಪ್ರತಿ**
extant
ಪರಿಶೀಲನೆ ಸಂಪಾದನೆಗಳಿಗೆ ಈಗ ಲಭ್ಯವಿರುವ ಹಸ್ತಪ್ರತಿ.

**ಉಪಸಂಹಾರ**
end of an entry in a descriptive cataloque of mss.
ವರ್ಣನಾತ್ಮಕ ಹಸ್ತಪ್ರತಿಸೂಚಿಯಲ್ಲಿ ಎತ್ತಿ ಬರೆಯುವ ಹಸ್ತಪ್ರತಿವಿವರಣೆಯ ಅಂತ್ಯಭಾಗದ ಕೆಲವು ಪಂಕ್ತಿಗಳು

**ಉಪಾದಾನಸಂಭಾರ**
a set of writing or painting instruments

ಮಸಿ ಬಣ್ಣ ಮೊದಲಾದವು ಸೇರಿದಂತೆ ಬಳಸುವ ಬರಹದ ಅಥವಾ ಚಿತ್ರಣದ ಸಲಕರಣೆಗಳು

ಊಹಾತ್ಮಕಪರಿಷ್ಕರಣ (ಸಂಸ್ಕರಣ)
conjuctural emendation or divinatio
ಹಸ್ತಪ್ರತಿಗಳು ಒದಗಿಸುವ ಪಾಠಸಾಕ್ಷ್ಯ ತೃಪ್ತಿ ನೀಡದಿದ್ದಾಗ ಸ್ವಬುದ್ಧಿ ಕೌಶಲ, ಕಲ್ಪನಾಶಕ್ತಿಗಳಿಂದ ಊಹಿಸಿ ಸಂಯೋಜಿಸುವ ಪಾಠ.

ಎಡಹಾಳೆ
verso
ತೆರೆದ ಪುಸ್ತಕದ ಎಡಭಾಗಕ್ಕಿರುವ ಹಾಳೆ.

ಎಬ್ಬು
writing
ಬರಹ

ಏಕೈಕಹಸ್ತಪ್ರತಿ
codex unicus
ಕೃತಿಪಠ್ಯದ ಹಲವು ಲಿಖಿತ ಹಸ್ತಪ್ರತಿಗಳಲ್ಲಿ ಈಗ ನಮ್ಮ ಪರಿಶೀಲನೆಗೆ ದೊರೆಯುವಂತೆ ಉಳಿದಿರುವ ಒಂದೇ ಒಂದು ಪ್ರತಿ.

ಓಲೆ (ಓಲೆಗರಿ)
a palm leaf ; a written letter
ಬರೆಯಲು ಬಳಸುವ ತಾಳೆಯ ಗರಿ; ಬರೆದ ಪತ್ರ.

ಕಕ್ಕಟೀ (ಖಟೀ)
potstone steatite pencil
ಕಪ್ಪು ಹಲಗೆಯ ಮೇಲೆ ಬರೆಯಲು ಬಳಸುವ ಮೃದುವಾದ ಬಿಳಿಯ ಕಲ್ಲಿನ, ಎಂದರೆ ಬಳಪದ ಕಲ್ಲಿನ, ಲೇಖನಿ; ಬಳಪ, ಶುಭ್ರೋಪಲ.

ಕಚೇಲ
string keeping together leaves of a codex; cover
ಹಸ್ತಪ್ರತಿಯ ಪತ್ರಗಳನ್ನು ಒಗ್ಗೂಡಿಸಿ ಕಟ್ಟುವ ಹೊದಿಕೆ ಅಥವಾ ದಾರ.

ಕಚ್ಛಪಿ
a form of manuscript; a book that is wider in the middle than at the ends; a tartoise - like manuscript
ಮಧ್ಯದಲ್ಲಿ ಅಗಲ ಹೆಚ್ಚಾಗಿರುವ ಗರಿಗಳಿಂದ ಕೂಡಿ ಆಮೆಯ ಮೈಯಂತೆ ಆಕಾರವುಳ್ಳ ಹಸ್ತಪ್ರತಿ.

ಕಜ್ಜಲ

black soot
ಕಾಡಿಗೆ; ಕಪ್ಪು; ಹೊಗೆಮಸಿ; ಅಕ್ಷರಗಳು ಸ್ಫುಟವಾಗಿ ಕಾಣಲು ಇದನ್ನು ಬಳಸುತ್ತದೆ.

**ಕಜ್ಜಲರಸ**
ink
ಬರಹದ ಮಸಿ, ಶಾಯಿ.

**ಕಟ್ಟು**
a codex, a manuscript volume
ಬರೆದ ಓಲೆಯ ಗರಿಗಳ ಕಟ್ಟು.

**ಕಠಿನಪಾಠ**
lactio difficilior
ಕವಿಪಾಠದಲ್ಲಿ ಸುಲಭವಾಗಿ ಅರ್ಥವಾಗುವ, ಆಧುನಿಕವಾಗಿ ತೋರುವ ಪಾಠಕ್ಕಿಂತ ಅಪೂರ್ವವೂ ಪ್ರಾಚೀನವೂ ನೈಘಂಟುಕವೂ ಆಗಿ ತೋರುವ ಕ್ಲಿಷ್ಟವಾದ ಪಾಠ.

**ಕಠಿನೀ (ಖಟನೀ)**
ನೋಡಿ: ಕಕ್ಕಟೀ

**ಕಡಿತ (ಕಡತ)**
a form of codex, specially prepared with cotton cloth
ಸುಮಾರು ೧ ಅಡಿ ಅಗಲವೂ ಹಲವು ಅಡಿಗಳಷ್ಟು ಉದ್ದವೂ ಆಗಿರುವ ಮತ್ತು ಸ್ವಲ್ಪಮಟ್ಟಿಗೆ ಮಂದವೂ ಆಗಿರುವ ಹತ್ತಿಯ ಬಟ್ಟೆಗೆ ಹುಣಿಸೇಬೀಜದ ಚರಿಯನ್ನು ಸಮತಲವಾಗಿ ಮೆತ್ತಿ ನಯವಾದ ಗಾರೆಕಲ್ಲಿನಿಂದ ಉಜ್ಜಿ ಹದವಾಗಿ ಒಣಗಿಸಿ, ಅದಕ್ಕೆ ಇದ್ದಲ ಪುಡಿಯನ್ನೋ ದೀಪದ ಕಾಡಿಗೆಯನ್ನೋ ಬಳಿದು ಸಿದ್ಧಪಡಿಸುತ್ತಿದ್ದ, ಬಳಪದಿಂದ ಬರೆಯುವಂತಿದ್ದ ಒಂದು ಬಗೆಯ ಲೇಖನಭಿತ್ತಿ.

**ಕಡಿತವೆಗ್ಗಡೆ (< ಕಡಿತವರ್ಗಡೆ)**
superintendent of financial matters in a state administration
ರಾಜ್ಯದ ಲೆಕ್ಕಪತ್ರಗಳ ಇಲಾಖೆಯ ಪರಮಾಧಿಕಾರಿ; ಪ್ರಧಾನ ಕರಣಿಕ.

**ಕಂಟ (< ಕಂಟಕ; ಕಂಠ)**
stylus to incise on palmleaf
ತಾಳಪತ್ರದ ಮೇಲೆ ಬರೆಯಲು ಬಳಸುತ್ತಿದ್ದ, ದಬ್ಬಳದಂತೆ ಚೂಪಾದ ತೆಳ್ಳನೆಯ ಕಬ್ಬಿಣದ ಕಡ್ಡಿ; ಲೇಖನಿ.

**ಕಣ್ತಪ್ಪು**
visual error, mechanical error

ರೂಪಸಾದೃಶ್ಯವುಳ್ಳ ೨-೩ ಅಕ್ಷರಗಳು ಒಟ್ಟಿಗೆ ಬಂದಿದ್ದಾಗ, ಓದಿಕೊಂಡು ಪ್ರತಿಮಾಡುವ ಸಂದರ್ಭದಲ್ಲಿ ಅವುಗಳಲ್ಲಿ ಒಂದು ಬಿಟ್ಟುಹೋಗುವುದು.

**ಕಪ್ಪಡ**
cloth cover used to safeguard a codex
ಹಸ್ತಪ್ರತಿಯ ಕಟ್ಟನ್ನು ಬಟ್ಟೆಯಿಂದ ಸುತ್ತಿ ಭದ್ರಗೊಳಿಸುವ ಅಗತ್ಯಕ್ಕಾಗಿ ಬಳಸುವ ಸಂರಕ್ಷಣೆಯ ವಸ್ತ್ರ; ವೇಷ್ಟನ.

**ಕಂಪಿ (ಕಂಬಿ)**
wooden planks to hold a codex at both ends; a wooden cover of the codex
ಓಲೆಗರಿಗಳ ಕಟ್ಟು ಅಥವಾ ಹಸ್ತಪ್ರತಿಯ ಎರಡು ಕಡೆಗಳಲ್ಲಿಯೂ ಗಟ್ಟಿಯಾಗಿ ಕಟ್ಟುವ ಭದ್ರತೆಯ ಮರದ ತೆಳ್ಳನೆಯ ಪಟ್ಟಿ.

**ಕಂಬಿಕಾ**
ನೋಡಿ : ಕಂಪಿ (ಕಂಬಿ)

**ಕಲಾಮು**
pen
ಕಾಗದದ ಮೇಲೆ ಬರೆಯಲು ಬಳಸುವ ಒಂದು ಸಾಧನ, ಲೇಖನಿ.

**ಕಲ್ಪಿತ ಉಭಯಸಮಾನಹಸ್ತಪ್ರತಿ**
hypothetical common ancestor
ಲಭ್ಯ ಹಸ್ತಪ್ರತಿಗಳ ನಡುವೆ ಇರುವ ಸಂಬಂಧಗಳನ್ನು ಮುಂದೆ ಎಂದಾದರೂ ವಿವರಿಸಬಹುದಾದ ಅನುಪಲಬ್ಧ ಹಸ್ತಪ್ರತಿ; ಹಿಂದೊಮ್ಮೆ ಅಸ್ತಿತ್ವದಲ್ಲಿತ್ತೆಂದು ಊಹಿಸಬೇಕಾದ ಪ್ರತಿ

**ಕವಳಿಗೆ (ಕವಳಿಕ, ಕವಳಿಕೆ)**
a codex; a line
ಕೈಬರಹದ ಓಲೆಗರಿಯ ಕಟ್ಟು, ಗ್ರಂಥ; ಸಾಲು, ಶ್ರೇಣಿ, ಪಂಕ್ತಿ

**ಕವಿಪಾಠ**
author's text,original; origenem detegere
ಕೃತಿಪಠ್ಯದ ಆದಿಸ್ವರೂಪ, ಎಂದರೆ ಕವಿ ಸ್ವತಃ ಅದಕ್ಕೆ ಕೊಟ್ಟಿದ್ದ ಮೂಲಸ್ವರೂಪ.

**ಕಳ್ಳಮುದ್ರಣ**
pirated edition
ಕವಿಪಾಠದ ಅಥವಾ ಅದರ ಅಧಿಕೃತ ಸಂಪಾದಿತಪಾಠದ ಅನಧಿಕೃತಮುದ್ರಣ.

**ಕಾಕಪಾದ**
caret
ಬರಹದಲ್ಲಿ ಏನಾದರೂ ಬಿಟ್ಟುಹೋಗಿದ್ದರೆ ಅದನ್ನು ಸೇರಿಸಲು ಪದಗಳ ನಡುವೆ ಬುಡದಲ್ಲಾಗಲಿ ಮಗ್ಗುಲಲ್ಲಾಗಲಿ ಹಾಕುವ ∧ ಚಿಹ್ನೆ; ಹಂಸಪಾದ.

**ಕಾಕಲ (ಕಾಕಲಿ, ಕಕಲ)**
paper
ಕಾಗದ

**ಕಾಗದ (> ಕಾಗಜ)**
paper
ಬರೆವಣಿಗೆಗೆ ಬಳಸುವ ಬಿದಿರು ಮುಂತಾದ ಸಾಮಗ್ರಿಯಿಂದ ತಯಾರಿಸುತ್ತಿದ್ದ ಲೇಖ್ಯವಸ್ತು.

**ಕಾಚನ (ಕಾಚನಕ)**
string or tape which ties parcel, bundle of papers or leaves of manuscripts
ಹಸ್ತಪ್ರತಿಯ ಕಾಗದಪತ್ರಗಳನ್ನು ಸೇರಿಸಿ ಕಟ್ಟುಕಟ್ಟಲು ಬಳಸುವ ದಾರ ಅಥವಾ ಟೇಪು.

**ಕಾಯಸ್ಥ**
official scribe
ಅಧಿಕೃತವಾಗಿ ನೇಮಿಸಿಕೊಂಡ ವೃತ್ತಿಲೇಖಕ.

**ಕಾರ್ಪಾಸಿಕಪಟ**
cotton cloth for writing
ಹತ್ತಿಯ ಬಟ್ಟೆಯಲ್ಲಿ ತಯಾರಿಸಿದ ಬರೆವಣಿಗೆಯ ಕಪ್ಪುಬಟ್ಟೆ; ಕಡತ.

**ಕಾಷ್ಠಪಟ್ಟಿಕಾ**
a wooden cover of the codex
ತಾಳೆಗರಿಗಳು ವ್ಯವಸ್ಥಿತವಾಗಿರಲು ತಾಳೆಯ ಗರಿಯ ಹಸ್ತಪ್ರತಿಯ ಇಕ್ಕಡೆಗಳಲ್ಲಿಯೂ ಅಳವಡಿಸಿದ ಮರದ ಪಟ್ಟಿ; ಕಂಪಿ (ಕಂಬಿ).

**ಕಿವಿತಪ್ಪು**
unintentional mistake of the ear while writing
ಹೇಳಿ ಬರೆಯಿಸುವವನ ಉಚ್ಚಾರಣೆ ಸ್ಫುಟವಾಗಿಲ್ಲದೆ ಇದ್ದರೆ ಪ್ರತಿಕಾರನಿಗೆ ಭ್ರಾಂತಿಯುಂಟಾಗಿ ತನಗೆ ಕೇಳಿಸಿದಂತೆ ಬರೆಯುವಾಗ ಆಗುವ ತಪ್ಪು.

**ಕುಂಚ (ಕುಂಚಿಕಾ)**
a brush meant for painting or writing
ಬರೆಯಲು ಅಥವಾ ಚಿತ್ರಿಸಲು ಬಳಸುವ ಕೂದಲಿನ ಕುಚ್ಚು.

**ಕುಟಿಲಲಿಪಿ**
cursive writing
ಓದಿ ಅರ್ಥಮಾಡಿಕೊಳ್ಳಲು ಸುಲಭವಲ್ಲದ ಓಟದ ಬರವಣಿಗೆ; ಅಕ್ಷರಗಳನ್ನು ಕೂಡಿಸಿ ಜೋಡಿಸಿ ಬರೆದ ಕೂಡುಬರಹ; ಮೋಡಿಬರಹ.

**ಕುಂಡಲನ**
encircling a blank space in a line indicating illegible or lost letter / letters in the exemplar

ಮಾತೃಕೆಯಲ್ಲಿ ಹಸ್ತಲಿಖಿತವಾದ ಪಂಕ್ತಿಗಳಲ್ಲಿ ಓದಲಾಗದ ಅಥವಾ ನಷ್ಟವಾದ ಅಕ್ಷರಗಳನ್ನು ಸೂಚಿಸಲು ಖಾಲಿಜಾಗವನ್ನು ಆವರಿಸುವಂತೆ ವೃತ್ತವನ್ನು ಸುತ್ತುವುದು.

ಕುಲಖಣೀ
a bad, irresponsible, indecent scribe
ಬೇಜವಾಬ್ದಾರಿಯುತ ಅಸಂಸ್ಕೃತಲಿಪಿಕಾರ.

ಕೂಚೀ
a paint brush
ಬಣ್ಣ ತುಂಬುವ ಕುಂಚ.

ಕೈತಪ್ಪು
unintentional mistake of running hand while writing or copying; lapsus calami
ಕಣ್ಣು ಸರಿಯಾಗಿ ನೋಡಿದರೂ ಕಿವಿ ಸರಿಯಾಗಿ ಕೇಳಿದರೂ ಬರೆಯುವ ಕೈ ತನ್ನದೇ ರೀತಿಯಲ್ಲಿ ಓಡಿ ಆಗುವ ತಪ್ಪು.

ಕೈಬರಹ
handwriting; transcript
ಕವಿಪಾಠದ ಕೃತಿಯನ್ನು ಕೈಯಕ್ಷರದಲ್ಲಿ ಬರೆದು ಸಿದ್ಧಪಡಿಸಿದ ನಕಲು, ಹಸ್ತಲಿಖಿತದ ಪ್ರತಿ; ಸ್ವಹಸ್ತಾಕ್ಷರ.

ಕೋರಿಕಾಗದ
a kind of rough handmade paper prepared out of rags etc
ಬಟ್ಟೆಯ ಚಿಂದಿಗಳಿಂದ ತಯಾರುಮಾಡಿದ ಕಾಗದ, ರಟ್ಟಿನಂತಹ ದಪ್ಪವಾದ ಮಾಸಲು ಬಿಳಿಯ ಕಾಗದ, ಮಡ್ಡಿ ಕಾಗದ.

ಕೋಶ
a codex; library
ಪ್ರಾಚೀನಗ್ರಂಥವೊಂದರ ಹಸ್ತಪ್ರತಿ, ಹಳೆಯ ಕೈಬರಹದ ಹೊತ್ತಿಗೆ; ಗ್ರಂಥಭಂಡಾರ.

ಕೋಶಶುದ್ಧಿ
trustworthiness corretness of a codex
ಪ್ರಾಚೀನಗ್ರಂಥದ ಹಸ್ತಪ್ರತಿಯ ಪ್ರಾಮಾಣಿಕತೆ, ಪರಿಶುದ್ಧತೆ.

ಕ್ರಯಚೀರಿಕಾ
sale deed written on a cloth
ಬಟ್ಟೆಯ ಮೇಲೆ ಬರೆದ ಕ್ರಯಪತ್ರ.

ಕ್ರೋಡಪತ್ರ
an additional leaf, post- script, supplement
ಹೆಚ್ಚಿನ ಹಾಳೆ, ಹೆಚ್ಚಿನ ಬರಹ, ಪರಿಶಿಷ್ಟ.

ಖಟಿಕಾ (ಖಟೀದಲ, ಖಟಿನೀದಲ)
ನೋಡಿ : ಕಕ್ಪಟೀ

ಖಟಿಕಾಸಮುದ್ಗಕ
a box with chalk /crayons
ಬರೆಹಕ್ಕೆ ಬಳಸುವ ಬಳಪಗಳನ್ನು ತುಂಬಿಸಿದ ಪೆಟ್ಟಿ.

ಖರತಾಲ
narrow, thick, yellowish variety of palm-leaf
ಅಗಲ ಕಿರಿದಾದ, ಮಂದವಾದ, ಹಳದಿಯ ಬಣ್ಣದ ಒಂದು ಬಗೆಯ ತಾಳೆಯ ಗರಿ.

ಗಂಡೀ
a form of manuscript, thickness corresponding to length; square
ಚಚ್ಚೌಕವಾದ ಆಕೃತಿಯುಳ್ಳ ಒಂದು ಬಗೆಯ ಹಸ್ತಪ್ರತಿ.

ಗತಿಶೀಲಪಠ್ಯ (ಚರಪಠ್ಯ)
amorphous, fluid text
ಕಾಲಕ್ರಮದಲ್ಲಿ ಬೆಳೆಯುತ್ತ ಬದಲಾಗುತ್ತ ಹೋಗುವ ಅನಿರ್ದಿಷ್ಟರೂಪದ ಅನಿಬದ್ಧ, ಅವ್ಯವಸ್ಥಿತ ಕೃತಿಪಠ್ಯ. ಬರಹಕ್ಕೆ ಇಳಿಯುವ ಮೊದಲೇ ಅನೇಕ ಕಡೆ ಅನೇಕ ರೂಪಗಳಲ್ಲಿ ಪ್ರಚಲಿತವಾಗಿರುವ ಮಹಾಕಾವ್ಯಗಳು, ಪುರಾಣಗಳು ಇವಕ್ಕೆ ಅನ್ವಯಿಸುವ ಮಾತು.

ಗತಿಶೀಲ ಪಠ್ಯಸಂಪಾದನೆ
textual dynamics
ಗತಿಶೀಲ ಪಠ್ಯಗಳ ಎಂದರೆ ಮುಖಿಸ್ಥ ಸಂಪ್ರದಾಯದ ಸ್ನಿಗ್ಧ ಸ್ವರೂಪದ ಪಠ್ಯಗಳೂ ಸೇರಿದಂತೆ ಮಹಾಕಾವ್ಯ ಪುರಾಣಾದಿ ರಚನೆಗಳ ಸಂಪಾದನೆಯಲ್ಲಿ ಅನುಸರಿಸಬೇಕಾಗಿ ಬರುವ ಗ್ರಂಥ ಸಂಪಾದನೆ; ಅದೃಢ ಪಾಠಪರಂಪರೆಯೊಂದರಿಂದ ಪ್ರತಿನಿಧಿತವಾದ ಅಸ್ಥಿರಪಾಠದ (fluid text) ಸಂಪಾದನೆ.

ಗುಂಡಿಕಲಿಪಿ
writing with any powder
ಯಾವುದಾದರೂ ಪುಡಿ ಬಳಸಿ ಬರೆದ ಬರಹ.

ಗೊಡವಚ
a herb used in the preservation of manuscripts
ಹಸ್ತಪ್ರತಿಗಳ ಸಂರಕ್ಷಣೆಗಾಗಿ ಬಳಸುವ ಒಂದು ಬಗೆಯ ಮೂಲಿಕೆ.

ಗೋರೋಚನ
yellow pigment to erase a letter or to paint
ಬಣ್ಣ ಹಚ್ಚಲಾಗಲಿ, ಅಕ್ಷರವನ್ನು ಅಳಿಸಲಾಗಲಿ ಬಳಸುವ ಒಂದು ಬಗೆಯ ಹಳದಿ ಗಂಧದ್ರವ್ಯ.

**ಗ್ರಥನ (ಗ್ರಂಥನ)**
to string words together, to compose (a literary work)
ಶಬ್ದಗಳನ್ನು ಸಮಂಜಸವಾಗಿ ಸರಗೊಳಿಸುವುದು, ಸಾಹಿತ್ಯಿಕಕೃತಿ ರಚಿಸುವುದು.

**ಗ್ರಂಥ**
a codex; a written work
ಬರೆದ ಓಲೆಯ ಗರಿಗಳ ಕಟ್ಟು, ಕವಿ ರಚಿಸಿದ ಪುಸ್ತಕ.

**ಗ್ರಂಥಪರಿಷ್ಕರಣ (ಗ್ರಂಥಸಂಸ್ಕರಣ)**
ನೋಡಿ : ಗ್ರಂಥಸಂಪಾದನೆ.

**ಗ್ರಂಥಪಾತ**
lacuna, loss
ಆಕಸ್ಮಿಕವಾಗಿ ಆಗಲಿ, ಮಾತೃಕೆಯ ಲಿಖಿತವನ್ನು ಓದಲು ಲಿಪಿಕಾರನಿಗೆ ಸಾಮರ್ಥ್ಯ ಇಲ್ಲದ ಸಂದರ್ಭದಲ್ಲಿ ಆಗಲಿ, ಮಾತೃಕೆಯಿಂದ ಎತ್ತಿದ ಹಸ್ತಪ್ರತಿಯ ಭಾಗ ಮುರಿದು ಮುಕ್ಕಾದ ಕಾರಣದಿಂದಾಗಲಿ, ಲಭ್ಯ ಹಸ್ತಪ್ರತಿಯ ಹಾನಿ ಕಾರಣವಾಗಿ ಆಗಲಿ, ಕೃತಿಪಠ್ಯದಲ್ಲಿ ಅಕ್ಷರಗಳ, ವಾಕ್ಯಗಳ ಅಥವಾ ಪುಟಗಳ ನಾಶವುಂಟಾಗುವುದು.

**ಗ್ರಂಥಸಂಖ್ಯೆ**
unit of 32 letters (in a verse)
ತಾಳೆಪ್ರತಿಯ ಗಾತ್ರವನ್ನು ಗುರುತಿಸುವಾಗ ಇಟ್ಟುಕೊಳ್ಳುವ ೩೨ ಅಕ್ಷರಗಳ ಘಟಕ, ಹಸ್ತಪ್ರತಿಗಳನ್ನು ಕೊಳ್ಳುವಾಗ ಬೆಲೆ ಗೊತ್ತುಮಾಡಲು, ಪ್ರತಿಗಳ ಸಿದ್ಧತೆಗೆ ಬಳಸಲು ಹಿಡಿಯುವ ಪದ್ಧತಿ.

**ಗ್ರಂಥಸಂಪಾದಕ**
editor, redactor
ಕೃತಿಪಠ್ಯದ ಸ್ವಹಸ್ತಾಕ್ಷರ ಪ್ರತಿಯನ್ನಾಗಲಿ, ಪರಂಪರಾಗತ ಪ್ರತಿಗಳನ್ನಾಗಲಿ ದೊರಕಿಸಿಕೊಂಡು, ಬಳಿಕ ಪಾಠಸಂಕಲನಾದಿ ವಿಧಿವಿಧಾನಗಳನ್ನು ಅನುಸರಿಸಿ ಪರಿಷ್ಕರಿಸುವ ಮೂಲಕ ಅದರ ಸಾಹಿತ್ಯಕೃತಿರೂಪವನ್ನು ಸಿದ್ಧಪಡಿಸುವವನು.

**ಗ್ರಂಥಸಂಪಾದನಶಾಸ್ತ್ರ**
textual criticism
ಗ್ರಂಥಸಂಪಾದನೆಯ ವಿಧಿವಿಧಾನಗಳನ್ನು ಕ್ರಮಬದ್ಧವಾಗಿ ನಿರೂಪಿಸುವ ಶಾಸ್ತ್ರ; ಗ್ರಂಥಪಾಠ ವಿಮರ್ಶೆ ಸಾಹಿತ್ಯವಿಮರ್ಶೆಗಳ ಮೂಲಕ (ಪೂರ್ವಸ್ತರ ಮತ್ತು ಉನ್ನತ ನೆಲೆಯ ವಿಮರ್ಶೆ) ಕವಿಕೃತಪಠ್ಯದ ಸ್ವಸ್ವರೂಪವನ್ನು ಸಿದ್ಧಪಡಿಸುವುದು ಹೇಗೆಂದು ತಿಳಿಸುವ ಶಾಸ್ತ್ರ.

**ಗ್ರಂಥಸಂಪಾದನೆ**
redaction, editing
ಕೃತಿಪಠ್ಯದ ಸ್ವಹಸ್ತಾಕ್ಷರ ಪ್ರತಿಯನ್ನಾಗಲಿ, ಪರಂಪರಾಗತ ಪ್ರತಿಗಳನ್ನಾಗಲಿ ದೊರಕಿಸಿಕೊಂಡು, ಬಳಿಕ ಪಾಠಸಂಕಲನಾದಿ ವಿಧಿವಿಧಾನಗಳನ್ನು ಅನುಸರಿಸಿ ಪರಿಷ್ಕರಿಸುವ ಮೂಲಕ ಅದರ ಸಾಹಿತ್ಯಕೃತಿರೂಪವನ್ನು (ಕವಿಪಾಠವನ್ನು) ಗೊತ್ತುಮಾಡುವುದು (ಗ್ರಂಥಪಾಠವಿಮರ್ಶೆ/ lower

criticism) ಮತ್ತು ಕವಿಯ ಕಾಲದೇಶಾದಿ ವ್ಯಕ್ತಿ ವಿವರಗಳನ್ನೂ ಕೃತಿವಸ್ತುವಿಶ್ಲೇಷಣೆಯನ್ನೂ ಪಾಠಸಾಮಗ್ರಿವಿವರಗಳನ್ನೂ, ಆ ಪಾಠಸಾಮಗ್ರಿ ಕವಿಪಾಠನಿಷ್ಕರ್ಷೆಗೆ ಒದಗಿದ ವಿಧಾನಗಳನ್ನೂ ವಿವರ ವಿಶದವಾಗಿ ನಿರೂಪಿಸುವುದು (ಉನ್ನತವಿಮರ್ಶೆ / higer criticism ).

ಗ್ರಂಥಿ
knot of a chord; a thread that holds a codex in tact
ಓಲೆಗಳನ್ನು ವ್ಯವಸ್ಥಿತವಾಗಿರುವಂತೆ ಕಟ್ಟಲು ಅವುಗಳ ಎಡಬಲದಲ್ಲಿ ರಂಧ್ರಗಳನ್ನು ಕೊರೆದಿದ್ದು ಅವುಗಳಲ್ಲಿ ಹಾದು ಹೋಗುವ ದಾರ.

ಘುಣಾಕ್ಷರನ್ಯಾಯ (ಘುಣಾಕ್ಷರಪ್ರಾಯ)
an incision in the palm leaf of a manuscript caused by an insect and resembling some what the form of a letter.
ಘುಣವೆಂಬ ಹುಳುವಿನಿಂದ (ಮರಮುಟ್ಟುಗಳನ್ನು ಕೊರೆಯುವ ಒಂದು ಬಗೆಯ ಹುಳು) ತಾಳೆಯೋಲೆಗಳಲ್ಲಿ ಕೊರೆಯಲ್ಪಟ್ಟ ಗೆರೆಗಳು ಅಕ್ಷರಗಳಂತೆ ಕಾಣುತ್ತವೆ, ಕೆಲವೊಮ್ಮೆ(ಹಾಗೆಯೇ ಮೂಢನಿಂದ ಒಮ್ಮೊಮ್ಮೆ ಜಾಣತನದ ಕೆಲಸಗಳು ಆಗಿಬಿಡುತ್ತವೆ).

ಚರಪತ್ರ
ನೋಡಿ : ಗತಿಶೀಲಪತ್ರ.

ಚಿತ್ತದೋಷ
ನೋಡಿ : ಉದ್ದೇಶಪೂರ್ವಕ ವ್ಯತ್ಯಾಸ

ಚಿತ್ರಲಿಪಿಕೋವಿದ
an expert scribe in the art of pictography
ಅಕ್ಷರಗಳಲ್ಲಿಯೇ ಪ್ರಾಣಿಗಳ ಚಿತ್ರಗಳನ್ನು ಅಳವಡಿಸಿ ಬರೆಯುವ ಕುಶಲತೆಯುಳ್ಳ ಲಿಪಿಕಾರ.

ಚೀರಿಕಾ (ಚೀರಿಕಾ)
cotton cloth prepared for writing
ಬರೆವಣಿಗೆಗೆ ಸಿದ್ಧಪಡಿಸಿದ ಹತ್ತಿಯ ಬಟ್ಟೆ.

ಛಾದನ
cotton clothcover of a codex
ಹಸ್ತಪ್ರತಿಯು ಹಾಳಾಗದಂತೆ ಆಚ್ಛಾದನೆಗೆ ಇರುವ ಹತ್ತಿಯ ಬಟ್ಟೆ.

ಛೇದಪಟ
a thin manuscript of a few leaves, a booklet
ಕೆಲವೇ ಪತ್ರಗಳಿರುವ ತೆಳ್ಳಗಿನ ಹಸ್ತಪ್ರತಿ, ಕಿರುಹೊತ್ತಗೆ.

ಟಿಪ್ಪಣಿಸ್ವೀಕರಣ
incorporation of marginalia; adscript

ಹಸ್ತಪ್ರತಿಯ ಪತ್ರಗಳ ಪಠ್ಯಭಾಗದ ಎಡಬಲ ಮಗ್ಗುಲುಗಳಲ್ಲಿ ಅಥವಾ ಸಾಲುಗಳ ನಡುವೆ ಉಪಾಧ್ಯಾಯನೋ ವಿದ್ಯಾರ್ಥಿಯೋ ಅಪೂರ್ವವಾದುದೊಂದು ಶಬ್ದದ ಅರ್ಥವೋ ವಸ್ತುವಿವರಣೆಯೋ ಬರೆದುಕೊಂಡಿದ್ದು, ಪ್ರತಿ ಮಾಡುವಾಗ ಆ ಬರಹ ಪಠ್ಯದ ಭಾಗವಾಗಿ ಒಳಸೇರುವುದು.

**ಟೀಕೆ**
scholium (pl. scholia)
ಪ್ರಾಚೀನಗ್ರಂಥಗಳ ಪದ ಅಥವಾ ವಾಕ್ಯಗಳಿಗೆ ಹಿಂದಿನ ಕಾಲದ ಭಾಷಾಪಂಡಿತರು, ಸಾಹಿತ್ಯಜ್ಞರು ಬರೆದ ಸಣ್ಣವಿವರಣೆ.

**ಠವಣಿಕ (ಠಮಣಿಕ, ಠವಣೆ)**
ನೋಡಿ : ಅಟ್ಟವಣೆ (ಅಟ್ಠವಣೆ)

**ತಪ್ಪುತೀರ್ಮಾನ**
error of judgement
ಹಸ್ತಪ್ರತಿಗಳನ್ನು ನಕಲುಮಾಡುವಾಗ ಲಿಪಿಕಾರನು ಮಾತೃಕೆಗಳ ಬರಹದ ವಿಷಯದಲ್ಲಿ ತೆಗೆದುಕೊಳ್ಳುವ ಗ್ರಹಿಕೆಯ ವ್ಯತ್ಯಾಸ.

**ತಮಾಲರಸ**
juice of *tamala* tree's leaves
ಕೂಡಲೇ ತಲುಪಿಸಬೇಕಾದ ಸಂದೇಶಗಳ ಬರೆವಣಿಗೆಗೆ ಬಳಸುವ ಹೊಂಗೆಯ ಮರದ ಎಲೆಗಳ ರಸ.

**ತಾಡಪತ್ರ**
a palm leaf
ಬರೆವಣಿಗೆಗೆ ಬಳಸುತ್ತಿದ್ದ ಕಿರಿದಾದ, ಮೃದುವಾದ, ಹಳದಿಜಾತಿಯ ತಾಳೆಯ ಮರದ ಗರಿ (ತಾಳೆ); ಅಗಲವಾದ ತೆಳ್ಳನೆಯ ಕಂದುಜಾತಿಯ ತಾಳೆಯ ಮರದ ಗರಿ (ಶ್ರೀತಾಳೆ).

**ತಾಡವೋಲೆ (ತಾಡೋಲೆ)**
ನೋಡಿ : ತಾಡಪತ್ರ

**ತಾಲಪತ್ರ (ತಾಲೀಪತ್ರ)**
ನೋಡಿ : ತಾಡಪತ್ರ

**ತಾಳ್ (ತಾಟ್, ತಾಟಿ, ತಾಳು, ತಾಳೆ)**
palm tree, borassus flabelliformis
ತಾಳೆಯ ಮರ (ಪ್ರಾಚೀನ ಕಾಲದಲ್ಲಿ ಇದರ ಗರಿಯನ್ನು ಸಂಸ್ಕರಿಸಿ ಬರೆವಣಿಗೆಗೆ ಬಳಸುತ್ತಿದ್ದರು)
ನೋಡಿ : ತಾಡಪತ್ರ.

**ತಾಳೆಗರಿ**
ನೋಡಿ : ತಾಡಪತ್ರ.

**ತಾಳೆಯೋಲೆ**
ನೋಡಿ : ತಾಡಪತ್ರ.

**ತಿದ್ದುಗಾರ**
corrector, reviser, diorthotes
ಪ್ರತಿಮಾಡುವಾಗ ಮಾತೃಕೆಯೊಂದಿಗೆ ಹೋಲಿಸಿ ಲಿಪಿಕಾರಸ್ಖಾಲಿತ್ಯಗಳನ್ನು ಸರಿಪಡಿಸುವವನು, ಪರಿಶೀಲಕ.

**ತಿದ್ದುಪಡಿ**
emendation
ಲಿಪಿಕಾರಸ್ಖಾಲಿತ್ಯಗಳನ್ನು ಸಂಪಾದನೆಯಲ್ಲಿ ಸರಿಪಡಿಸುವುದು ಕಾರಣವಾಗಿ, ಲೇಖಕನೇ ಸ್ವತಃ ಮಾಡಬಹುದಾದ ಮಾರ್ಪಾಡುಗಳು ಕಾರಣವಾಗಿ ಕವಿಪಾಠದಲ್ಲಿ ಉಂಟಾಗುವ ಅಥವಾ ತರುವ ಪರಿಷ್ಕರಣ.

**ತೂಲೀ (ತೂಲಿಕಾ)**
a feather used for writing or to paint
ಬರೆಯಲು ಅಥವಾ ಚಿತ್ರಿಸಲು ಬಳಸುವ ಒಂದು ಬಗೆಯ ಹಕ್ಕಿಯ ಗರಿ.

**ತುಟಿಕ**
insect destroying a manuscript
ಪುಸ್ತಕಗಳನ್ನು ಕೊರೆದು ಹಾಳುಮಾಡುವ ಹುಳು.

**ತುಟಿತ**
damaged, torn or chaped (written leaves)
ಪತ್ರಗಳು ಮುರಿದುಹೋಗಿರುವುದು, ಹರಿದುಹೋಗಿರುವುದು ಅಥವಾ ಮುಕ್ಕಾಗಿರುವುದು.

**ದಂಡ**
a punctuation mark indicating a stop in a verse (or a prose passage)
ಪದ್ಯದ ( ಅಥವಾ ಗದ್ಯಭಾಗದ) ಮುಕ್ತಾಯವನ್ನು ಸೂಚಿಸಲು ಬಳಸುವ ಒಂದು ಅಥವಾ ಎರಡು ಋಜೂರ್ಧ್ವರೇಖೆ).

**ದಿವಿರ (ದಿವೀರ)**
a scribe
ಲಿಪಿಕಾರ (ಇವರಲ್ಲಿ ಗಂಜದಿವಿರ, ಗ್ರಾಮದಿವಿರ ಇ. ವರ್ಗಗಳುಂಟು)

**ದುರ್ಲಿಪಿದೂಷಣ**
wrong writing
ತಪ್ಪು ಬರೆಯುವುದು. ಕೆಟ್ಟ ಬರವಣಿಗೆ.

ದುಷ್ಟಪಾಠ
corrupt reading, corruption
ಉದ್ದೇಶಪೂರ್ವಕವಾಗಿ ಅಥವಾ ಆಕಸ್ಮಿಕವಾಗಿ ಸ್ಖಾಲಿತ್ಯಗಳನ್ನೋ ಲೋಪಪ್ರಕ್ಷೇಪಾದಿಗಳನ್ನೋ ಮಾಡಿದ್ದರಿಂದ ಹಾಳಾದ ಪಾಠ.

ದೂರಪುನರ್ಲೇಖನ
tele-dittography
ಸಮೀಪವರ್ತಿಗಳಲ್ಲದ ಅಕ್ಷರಗಳನ್ನಾಗಲಿ, ಶಬ್ದಗಳನ್ನಾಗಲಿ, ಹಸ್ತಪ್ರತಿಗಳ ಪ್ರತಿಮಾಡುವಾಗ ಇರಬೇಕಾದ ಕಡೆಯಲ್ಲಿ ಬಿಟ್ಟು ಇನ್ನೊಂದು ಕಡೆ ಬರೆಯುವುದು.

ದೂರಪ್ರತಿ
distant copy
ಕೃತಿಪಠ್ಯಕ್ಕೆ ಕಾಲಾನುಕ್ರಮದಲ್ಲಿ ಹುಟ್ಟಿದ ಪರಂಪರಾಗತ ಹಸ್ತಪ್ರತಿಗಳಲ್ಲಿ ಈಚಿನ ಯಾವುದೋ ಒಂದು ಹಸ್ತಪ್ರತಿ.

ದೂರಸದೃಶಾಕ್ಷರಲೋಪಲೇಖನ
tele-haplography
ಸದೃಶಾಕ್ಷರಗಳೋ ಶಬ್ದಗಳೋ ಒಂದರ ಮಗ್ಗುಲಲ್ಲಿ ಒಂದು ಇರದೆ ಸ್ವಲ್ಪದೂರದಲ್ಲಿ ಲಿಖಿತವಾಗಿದ್ದು, ಅವುಗಳ ಸಾದೃಶ್ಯದಿಂದ ಉಂಟಾದ ಭ್ರಾಂತಿ ಕಾರಣವಾಗಿ ಅವುಗಳ ನಡುವಣ ಲಿಖಿತಭಾಗ ಪ್ರತಿಮಾಡುವ ಸಂದರ್ಭದಲ್ಲಿ ಬಿಟ್ಟುಹೋಗುವುದು.

ದೃಷ್ಟಿದೋಷ
ನೋಡಿ : ಕಣ್ತಪ್ಪು.

ದೇಶಾಂತರಪಾಠ
reading current in a different area
ಬೇರೊಂದು ಪ್ರದೇಶದಲ್ಲಿ ಪ್ರಚಲಿತವಾಗಿರುವ ಪಾಠ.

ದೌತಿ
inkpot
ಬರೆಯುವ ಮಸಿಯನ್ನು ತುಂಬಿಸಿದ ಪಾತ್ರೆ, ಮಸಿಪಾತ್ರೆ.

ನಾರಾಚ
stylus
ಬರೆವಣಿಗೆಗೆ ಬಳಸುವ ಸಾಧನ ಅಥವಾ ಲೋಹದ ಕಡ್ಡಿ, ಕಂಟ.



(ಮುಂದುವರಿಯುವುದು)

# ಗ್ರಂಥಾವಲೋಕನ

**1. ಕಂನಾಡಿಗೆ ಜೈನರ ಕೊಡುಗೆಗಳು :** ಲೇಖಕರು : ಕುಂ. ಬಾ. ಸದಾಶಿವಪ್ಪ, ಪ್ರಕಾಶಕರು: ಮಾಲತೇಶ ಪ್ರಕಾಶನ, ಹರಪನಹಳ್ಳಿ, ಪ್ರಕಟಣೆ : ಮೊದಲ ಮುದ್ರಣ 2002, ಪುಟಗಳು : x+92 = 102 ಬೆಲೆ ರೂ. 50/-

ಉತ್ತಮ ಶಿಕ್ಷಕ ಪ್ರಶಸ್ತಿ ವಿಜೇತ ಶ್ರೀ ಕುಂ. ಬಾ. ಸ. ರವರು ಬಹು ಪರಿಶ್ರಮ ವಹಿಸಿ ನಡೆಸಿದ ಸಂಶೋಧನಾ ಫಲಶ್ರುತಿಯಾಗಿ ಈ ಕೃತಿ ರಚನೆಗೊಂಡಿದೆ. ಇದರಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದಂತೆ ಪ್ರಮುಖ ವಿವರಗಳನ್ನು ನೀಡಲಾಗಿದೆ. ಜೈನಧರ್ಮದ ಪ್ರಸಾರಕ್ಕೆ ಕಾರಣೀಭೂತರಾಗಿದ್ದ ಕದಂಬರು, ಗಂಗರು, ಚಾಲುಕ್ಯರು, ಹೊಯ್ಸಳರು ಮುಂತಾದ ರಾಜಮನೆತನದ ವಿವರಗಳು ಇಲ್ಲಿವೆ ಹಾಗೂ ಜೈನಧರ್ಮ ಪ್ರಸಾರಕ್ಕೆ ನೀಡಿದ ಅಪಾರ ಕೊಡುಗೆಗಳ ಮಾಹಿತಿಯೂ ಇಲ್ಲಿದೆ. ಇದು ಒಟ್ಟಿನಲ್ಲಿ ಜೈನ ಧರ್ಮ ಮತದ ಬಗ್ಗೆ ಸಂಕ್ಷಿಪ್ತ ವಿವರ ನೀಡುವ ಸಂಗ್ರಹಯೋಗ್ಯ ಕೃತಿಯಾಗಿದೆ.

**2. ಚೇತನ ಚಿಲುಮೆ (ಮಕ್ಕಳ ಕವಿತೆಗಳ ಸಂಕಲನ)** ಲೇಖಕರು : ಪ್ರೊ. ಡಿ. ಲಿಂಗಯ್ಯ, ಪ್ರಕಾಶಕರು : ದಿನಕರ ಪ್ರಕಾಶನ, ಬೆಂಗಳೂರು - 85, ಪ್ರಕಟಣೆ : 2002 ಪ್ರಥಮ ಮುದ್ರಣ, ಪುಟಗಳು : vi+46=52, ಬೆಲೆ ರೂ. 30/-

ಮಗುವಿನ ಮುಗ್ಧ ಮನಸ್ಸು, ನಿಷ್ಕಲ್ಮಷ ಚಿತ್ತದ ಶುದ್ಧ ನೈಜ ಆಟ-ಪಾಠಗಳು ಎಂಥವರ ಮನದಲ್ಲೂ ಕಲ್ಪನೆಯ ತರಂಗಗಳನ್ನು ಎಬ್ಬಿಸಲು ಶಕ್ತವಾಗಿರುತ್ತವೆ. ಕವಿಗಳಂತೂ ಭಾವೋನ್ಮಾದಕ್ಕೆ ಒಳಗಾಗುವುದು ಶತಸಿದ್ಧ. ಲೇಖಕ ಪ್ರೊ. ಡಿ. ಲಿಂಗಯ್ಯ ವಸ್ತುತಃ ನೈಜ ಕವಿ. ಮೊಮ್ಮಗಳ ಆಟಪಾಠ ಈ ಗ್ರಂಥ ರಚನೆಗೆ ಸ್ಫೂರ್ತಿ ಚಿಲುಮೆಯನ್ನು ಚಿಮ್ಮಿಸಿದೆ. ಭಾವಪರವಶರಾಗಿ ಕಲ್ಪನೆಯ ಲಹರಿಯನ್ನು ಹರಿಸಿದ್ದಾರೆ. ಸರಳ-ಸುಂದರ ಮಾತುಗಳಲ್ಲಿ ಪ್ರೀತಿ, ವಾತ್ಸಲ್ಯ, ಅಕ್ಕರೆ, ನಲವು ಸ್ಫುರಿಸಿದ್ದಾರೆ. ಮಕ್ಕಳಿಗೆ ಮುದನೀಡುವ ಹಾಗೂ ದೊಡ್ಡವರೂ ಓದಿ ಆನಂದಿಸುವ ಕವನ ಸಂಗ್ರಹ ಇದಾಗಿದೆ.

**3. ಹಿರಿಯರ ಹಾದಿ (ರಸ ಪ್ರಸಂಗಗಳ ಸಂಗ್ರಹ)** ಸಂಪಾದಕರು : ಟಿ.ವಿ. ವೆಂಕಟರಮಣಯ್ಯ, ಪ್ರಕಾಶಕರು: ಟಿ.ವಿ. ವೆಂಕಟರಮಣಯ್ಯ, 218, ಕೆ.ಹೆಚ್.ಬಿ. ಕಾಲೋನಿ, 2ನೇ ಹಂತ, ಬಸವೇಶ್ವರನಗರ, ಬೆಂಗಳೂರು - 79, ಮುದ್ರಣ : ಪ್ರಥಮ ಮುದ್ರಣ 2003, ಪುಟಗಳು : 6+194=200 ಬೆಲೆ ರೂ. 80/-

ಉನ್ನತ ವ್ಯಕ್ತಿಗಳ ಜೀವನದಲ್ಲಿ ಜರುಗಿದ ರಸಪ್ರಸಂಗಗಳ ಸಂಗ್ರಹಗಳು ಈ ಕೃತಿಯಲ್ಲಿ ಸಂಕಲನಗೊಂಡಿವೆ. ನುರಿತ ಸಂಗ್ರಹಕಾರರು, ಸಮರ್ಥ ಗ್ರಂಥಕರ್ತರೂ ಆಗಿರುವ ಶ್ರೀ ವೆಂಕಟರಮಣಯ್ಯನವರು ಬಹು ಶ್ರಮವಹಿಸಿ ಅತ್ಯುತ್ತಮ ರಸಪ್ರಸಂಗಗಳನ್ನು ಸಂಗ್ರಹಿಸಿ ಓದುಗರಿಗೆ ಸ್ತುತ್ಯರ್ಹ ಕೆಲಸವನ್ನು ಮಾಡಿರುತ್ತಾರೆ. ಈ ಕೃತಿಯಲ್ಲಿ ಅತ್ಯಂತ ಪ್ರಾಚೀನ ತತ್ವಜ್ಞಾನಿಗಳು, ಚಕ್ರವರ್ತಿಗಳು, ಕವಿಶ್ರೇಷ್ಠರುಗಳು ಹಾಗೂ ಅಲೆಕ್ಸಾಂಡರ್, ಎಪಿಕ್ಟೆಟಿಸ್, ಸಾಕ್ರಟೀಸ್, ಸೀಸರ್, ಸಿಕಂದರ್, ನಾನಕ್, ಕನ್ಫ್ಯೂಶಿಯಸ್, ಕಾಳಿದಾಸ, ಕೊಲಂಬಸ್, ಗೆಲಿಲಿಯೋ, ಘಾಲಿಬ್, ಯೇಸು ಮೊದಲಾದವರಿಗೆ ಸಂಬಂಧಿಸಿದ ರಸಪ್ರಸಂಗಗಳನ್ನಲ್ಲದೆ ಇತ್ತೀಚಿನ ಗಣ್ಯರಾದ ಕಾರಂತ, ಐಸನ್‌ಹೋವರ್, ಕುವೆಂಪು, ಮೊರಾರ್ಜಿ, ಬೀಚಿ, ರಾಶಿ, ಶ್ರೀರಂಗ, ಫೀಲ್ಡ್ ಮಾರ್ಷಲ್ ಕರಿಯಪ್ಪ ಮುಂತಾದವರವರೆಗೂ ಈ ಕೃತಿಯ ವ್ಯಾಪ್ತಿ ವ್ಯಾಪಿಸಿದೆ. ಪ್ರಾಚೀನ, ಅರ್ವಾಚೀನ ರಸಪ್ರಸಂಗಗಳ ಸಂಗಮ ಪ್ರಿಯವೆನಿಸುವುದರಲ್ಲಿ ಸಂದೇಹವಿಲ್ಲ.

**4. ಕೇಶವ್ಯಾಖ್ಯಾನ (ಆತ್ಮಕಥನ)** ಲೇಖಕರು : ಕೇಶವಭಟ್ಟ, ಪ್ರಕಾಶಕರು : ಚಿರಸಾಹಿತ್ಯ ಪ್ರಕಾಶನ, 754, 15ನೆಯ ಮುಖ್ಯರಸ್ತೆ, ಬನಶಂಕರಿ 2ನೇ ಹಂತ, ಬೆಂಗಳೂರು - 70, ಪುಟಗಳು : xxii+54 ಬೆಲೆ ರೂ. 30/-

ಪ್ರೊ॥ ಕೇಶವಭಟ್ಟರು ತಮ್ಮ ಜೀವನದ ಪ್ರಮುಖ ಘಟನೆ, ವಿವರಗಳನ್ನು ಎಳೆಎಳೆಯಾಗಿ ಸ್ವಗತ ಶೈಲಿಯಲ್ಲಿ ಉಲ್ಲೇಖಿಸಿದ್ದಾರೆ. ಈ ಪುಸ್ತಕದಲ್ಲಿ ಅವರ ಜೀವನದ ಸಂಪೂರ್ಣ ವಿವರಗಳು ದೊರೆಯುವುದಲ್ಲದೆ ಅವರಿಗೆ ಲಭಿಸಿರುವ ಪ್ರಶಸ್ತಿ ಪುರಸ್ಕಾರಗಳ ವಿವರ, ಅವರು ರಚಿಸಿರುವ ಕೃತಿಗಳಯಾದಿಯೂ ದೊರೆಯುತ್ತದೆ. ಇವರ ಹಲವು ಕೃತಿಗಳಿಗೆ ಬಂದಿರುವ ವಿಮರ್ಶೆಯ ತುಣುಕುಗಳೂ ಇಲ್ಲಿವೆ. ಇದು ಸಂಗ್ರಹಯೋಗ್ಯ ಕೃತಿಯಾಗಿದೆ.

**5. ಮಕ್ಕಳ ಭವಿಷ್ಯ ಮನೆಯಲ್ಲೇ (ನೀತಿಬೋಧಕ ಪ್ರಬಂಧ ಸಂಕಲನ)** ಲೇಖಕರು: ಡಿ.ಎ. ಲಕ್ಷ್ಮೀನಾಥ, ಪ್ರಕಾಶಕರು : ನವಚೇತನ ಪ್ರಕಾಶನ, 510 (240) 10ನೇ 'ಸಿ' ಮುಖ್ಯರಸ್ತೆ, 1ನೇ ಬಡಾವಣೆ, ಜಯನಗರ, ಬೆಂಗಳೂರು - 11, ಮುದ್ರಣ : 2002, ಪುಟಗಳು 56, ಬೆಲೆ ರೂ. 25/-

ಇಂದಿನ ಮಕ್ಕಳು ನಾಳಿನ ನಾಗರೀಕರು. ಇವರು ಉತ್ತಮ ನಾಗರೀಕರಾಗಬೇಕಾದರೆ ಇವರಿಗೆ ಮೌಲಿಕ ಶಿಕ್ಷಣದ ಅಗತ್ಯವಿರುತ್ತದೆ. ಈ ಶಿಕ್ಷಣವನ್ನು ಕೊಡಬಲ್ಲವರು ಯಾರು? ಇದನ್ನು ಸಮರ್ಥ ರೀತಿಯಲ್ಲಿ ಕೊಡಬಲ್ಲವರು ತಾಯಿ, ತಂದೆ ಹಾಗೂ ಗುರು. ಈ ಗುರುವಿನ ಮೇರುಸ್ಥಾನ ತಂದೆ/ ತಾಯಿಗಳಿಗೆ ಮೀಸಲು ಎಂಬುದು ಸಮಾಜ ಕಂಡುಕೊಂಡಿರುವ ಸತ್ಯವಾಗಿದೆ. ಇದನ್ನೇ ಲೇಖಕರು ತಾಯಿ, ತಂದೆ ಹಾಗೂ ಗುರುವಿನ ಮೂಲಕ ತಿಳಿಸಿಕೊಟ್ಟಿದ್ದಾರೆ. ಮಕ್ಕಳ ಭವಿಷ್ಯ ಮನೆಯಲ್ಲೇ ಎಂಬುದನ್ನು ಸೂಕ್ತ ಉಕ್ತಿ, ನೀತಿಕಥನಗಳ ಮೂಲಕ ಉಲ್ಲೇಖಿಸಿ ತಂದೆ, ತಾಯಿಗಳು ಮಕ್ಕಳ ಭವಿಷ್ಯದ ರೂವಾರಿಗಳು ಎಂಬುದನ್ನು ನಿರೂಪಿಸಿದ್ದಾರೆ.

**6. ಸೋದೆಮಠದ ಶ್ರೀ ವಿಶ್ವೇಂದ್ರತೀರ್ಥರ ಕೀರ್ತನ ಮಂಜರಿ** ಸಂಪಾದಕರು : ಡಾ॥ ಶ್ರೀನಿವಾಸ ಹಾವನೂರು, ಪ್ರಕಾಶಕರು : ಹಾವನೂರಿನ ಶ್ರೀ ವಾದಿರಾಜರ ಮೃತ್ತಿಕಾ ವೃಂದಾವನ ಮಠ, ಪ್ರಕಟಣೆ: 2001, ಪುಟಗಳು 91, ಬೆಲೆ ರೂ. 30/-

ಸೋದೆಮಠದ ಇಂದಿನ ಶ್ರೀಗಳಾದ ಶ್ರೀ ವಿಶ್ವೋತ್ತಮ ತೀರ್ಥರ ಗುರುಗಳು ಶ್ರೀ ವಿಶ್ವೇಂದ್ರ ತೀರ್ಥರು. ಇವರು ಸಂಸ್ಕೃತದ ಪ್ರಕಾಂಡ ಪಂಡಿತರು. ಸೃಜನಶೀಲ ಧಾರ್ಮಿಕ ವಿದ್ವಾಂಸರು. ಈ ಕೀರ್ತನೆಗಳಲ್ಲಿನ ಕೆನೆಗಟ್ಟಿದ ಭಕ್ತಿಭಾವ, ಭಕ್ತಾದಿಗಳಿಗೆ ಧನ್ಯತೆಯ ಮತ್ತೇರಿಸುತ್ತವೆ. ಆನಂದ ತುಂದಿಲರನ್ನಾಗಿಸುತ್ತದೆ. ಈ ಕೀರ್ತನೆಗಳಲ್ಲಿನ ಅನುಪ್ರಾಸ ಗೇಯತೆಯನ್ನು ವೃದ್ಧಿಸಿ ಹಾಡುವವರಿಗೆ ಹಾಗೂ ಕೇಳುವವರಿಗೂ ಸಂತಸ ನೀಡುತ್ತವೆ. ಇದು ಸಂಗ್ರಹಯೋಗ್ಯ ಕೀರ್ತನ ಕೃತಿಯಾಗಿದೆ.

**7. ವ್ಯಕ್ತಿ ಚಿಂತನ (ಮಾಸ್ತಿ ಅಧ್ಯಯನ ಪೀಠ ನಡೆಸಿದ ಉಪನ್ಯಾಸ ಪಂಚಸರಣಿಯಲ್ಲಿನ ಮಾಸ್ತಿಯುವರನ್ನು ಕುರಿತ ಚಿಂತನೆ ಭಾಗ - 1)** ಪ್ರಕಾಶಕರು : ಮಾಸ್ತಿ ಅಧ್ಯಯನ ಪೀಠ, 49, ಡಾ॥ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ರಸ್ತೆ, ಗವಿಪುರ ವಿಸ್ತರಣ, ಬೆಂಗಳೂರು-19, ಪ್ರಕಟಣಾ ವರ್ಷ : ಜೂನ್ 2001, ಪುಟಗಳು: 49+vi ಬೆಲೆ ರೂ. 40/-

ಮಾಸ್ತಿ ಅಧ್ಯಯನ ಪೀಠದ ಆಶ್ರಯದಲ್ಲಿ ಮಾಸ್ತಿಯವರ ಕೃತಿಗಳನ್ನು ಕುರಿತು ಮಾಡಿದ ಉಪನ್ಯಾಸಗಳ ಈ ಮೊದಲ ಸಂಕಲನದಲ್ಲಿ ಶ್ರೀ ನಿಟ್ಟೂರು ಶ್ರೀನಿವಾಸರಾಯರ ಕೆಲವು ನೆನಪುಗಳು, ಶ್ರೀ ಎಸ್.ಆರ್. ರಾಮಸ್ವಾಮಿ, ಪ್ರೊ॥ ಜಿ. ಅಶ್ವತ್ಥನಾರಾಯಣ ಮತ್ತು ಪ್ರೊ॥ ಎಸ್.ಆರ್. ಮಳಗಿಯವರು ಮಾಡಿದ ಉಪನ್ಯಾಸಗಳಿವೆ. ಇವಲ್ಲದೆ ಮಾಸ್ತಿ ಅಧ್ಯಯನ ಪೀಠದ ಬಗ್ಗೆ ಮಾಹಿತಿ, ಪೀಠದ ಚಟುವಟಿಕೆಗಳು, ಪೀಠದ ಪ್ರಕಟಣೆಗಳ ವಿವರಗಳಿವೆ. ಕೃತಿಯ

ಮೊದಲಲ್ಲಿ ಪೀಠದ ಉದ್ಘಾಟನೆ ಸಂದರ್ಭದಲ್ಲಿ ತೆಗೆದ ಕೆಲವು ಚಿತ್ರಗಳೂ ಇವೆ. ಮಾಸ್ತಿ ಬಗ್ಗೆ ಅಧ್ಯಯನ ಮಾಡುವವರಿಗೆ ಇದು ಅತ್ಯಂತ ಉಪಯುಕ್ತ ಕೃತಿ.

**8. ಕೃತಿ ಚಿಂತನ (ಮಾಸ್ತಿ ಅಧ್ಯಯನ ಪೀಠದ ಆಶ್ರಯದಲ್ಲಿ ಮಾಸ್ತಿಯವರ ಕೃತಿಗಳನ್ನು ಕುರಿತು ಮಾಡಿದ ಉಪನ್ಯಾಸಗಳ ಮೊದಲ ಸಂಕಲನ)** ಪ್ರಕಾಶಕರು : ಮಾಸ್ತಿ ಅಧ್ಯಯನ ಪೀಠ, 49, ಡಾ|| ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ರಸ್ತೆ, ಗವಿಪುರ ವಿಸ್ತರಣ, ಬೆಂಗಳೂರು-19, ಪ್ರಕಟಣಾ ವರ್ಷ : ಜೂನ್ 2001, ಪುಟಗಳು: 175+vi ಬೆಲೆ ರೂ. 80/-

ಈ ಕೃತಿಯಲ್ಲಿ ಮಾಸ್ತಿಯವರ ಕೆಲವು ಮುಖ್ಯ ಕೃತಿಗಳ ಬಗ್ಗೆ ಖ್ಯಾತ ಲೇಖಕರುಗಳಾದ ಪ್ರೊ|| ಅ.ರಾ. ಮಿತ್ರ, ಪ್ರೊ|| ಜಿ. ಅಶ್ವತ್ಥನಾರಾಯಣ, ಪ್ರೊ|| ಜಿ. ವೆಂಕಟಸುಬ್ಬಯ್ಯ, ಡಾ|| ವಿಜಯಾ, ಪ್ರೊ|| ದೊಡ್ಡರಂಗೇಗೌಡ, ಪ್ರೊ|| ಎಂ.ಆರ್. ಲಕ್ಷ್ಮೀದೇವಿ, ಶ್ರೀಸ್ವಾಮಿ ಹರ್ಷಾನಂದಜೀ ಮಹರಾಜ್, ಡಾ|| ಎಲ್.ಜಿ. ಸುಮಿತ್ರರವರ ವಿಚಾರಪೂರ್ಣ ಲೇಖನಗಳು ಮಾಸ್ತಿಯವರ ಕೆಲ ಕೃತಿಗಳ ಬಗ್ಗೆ ಹೊಸ ಬೆಳಕು ಚೆಲ್ಲುತ್ತವೆ. ಈ ಕೃತಿ ಸಹ ಪೀಠದ ಬಗ್ಗೆ ಮಾಹಿತಿ, ಚಟುವಟಿಕೆಗಳ ವಿವರ ಹಾಗೂ ಪ್ರಕಟಣೆಗಳ ವಿವರ ನೀಡುತ್ತದೆ. ಕಾರ್ಯಕ್ರಮದ ಕೆಲವು ವರ್ಣಚಿತ್ರಗಳೂ ಇಲ್ಲಿದ್ದು ಆಕರ್ಷಣೆಯನ್ನು ವೃದ್ಧಿಸಿದೆ. ಇದೊಂದು ಸಂಗ್ರಹಯೋಗ್ಯ ಕೃತಿ.

**9. ಕನ್ನಡ ತಿರುಪ್ಪಾವೈ** ಕರ್ತೃ ಪ್ರೊ|| ನಾ. ಗೀತಾಚಾರ್ಯ, ಪ್ರಕಾಶಕರು : ನಾರಾಯಣರಾವ್ ಸಂಸ್ಕೃತಿ ಕೇಂದ್ರ, ದೊಡ್ಡಹೆಜ್ಜಾಜಿ, ಬೆಂಗಳೂರು, ಪ್ರಕಟಣಾ ವರ್ಷ : 2002, ಪುಟಗಳು: 74 + x ಬೆಲೆ ರೂ. 40/-

'ತಿರುಪ್ಪಾವೈ' ತಮಿಳು ಸಾಹಿತ್ಯದಲ್ಲಿನ ಪವಿತ್ರ ಧಾರ್ಮಿಕ ಕೃತಿ. ಇದರಲ್ಲಿ ಮೂವತ್ತು ಸ್ತೋತ್ರಗಳಿವೆ. ಕನ್ನಡ ಸಾಹಿತ್ಯಕ್ಕೆ ಈ ಪವಿತ್ರ ಸ್ತೋತ್ರ ಮಂಜರಿ ಹಲವು ವಿಧದಲ್ಲಿ ಅನುವಾದವಾಗಿದ್ದರೂ, ಪ್ರೊ|| ಗೀತಾಚಾರ್ಯರ ಈ ಕೃತಿ ವೈಶಿಷ್ಟ್ಯಪೂರ್ಣವಾಗಿದೆ. ಈ ಕೃತಿಯಲ್ಲಿ ಲೇಖಕರು ಇದುವರೆವಿಗೂ ಕಂಡು ಬಂದ ಅನೇಕ ವಿವರಗಳನ್ನು ಪ್ರಸ್ತಾವನೆಯಲ್ಲಿ ನೀಡಿ ತಮ್ಮ ಕೃತಿಯ ಮಹತ್ವವನ್ನು ಹೆಚ್ಚಿಸಿಕೊಂಡಿದ್ದಾರೆ. 'ತಿರುಪ್ಪಾವೈ' ಪ್ರಾಯಃ ದಕ್ಷಿಣ ಭಾರತದಲ್ಲಿಯೇ ದೇಸೀ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯನ್ನು ಮೊದಲ ಬಾರಿಗೆ ಪ್ರತಿಪಾದಿಸಿದ ಹಾಗೂ ತಮಿಳು ಸಾಹಿತ್ಯ ಚರಿತ್ರೆಯನ್ನು ಹಾಡಿ ಹೊಗಳಿರುವ ಮೌಲಿಕ ಕೃತಿ. ಇಲ್ಲಿನ ಅನುವಾದದಲ್ಲಿ ಲೇಖಕರು ಬಹಳ ಶ್ರಮವಹಿಸಿ ಪದ್ಯದ ಮೂಲರೂಪಕ್ಕೆ ಮತ್ತು ಆಶಯಕ್ಕೆ ಭಂಗ ಬರದಂತೆ ಸಾಧ್ಯವಾದಷ್ಟು ಮೂಲ ಪದಗಳನ್ನೇ ಬಳಸಿಕೊಂಡು ಸುಲಭವಾಗಿ ಓದಿಕೊಂಡು ಹೋಗುವಂತೆ ಸರಳ ನುಡಿಗಳಲ್ಲಿ ಅನುವಾದಿಸಿದ್ದಾರೆ. ಇದಕ್ಕೆ ಅನುವಾದಕರ ಈ ಮಾತುಗಳು ಪುಷ್ಟಿ ನೀಡುತ್ತವೆ. "ಇದರ ಮೂಲ ಪದ್ಯದ ಭಾಷೆ ಕನ್ನಡದ ಸೋದರ ಭಾಷೆಯಾಗಿದ್ದು ಹಳೆಯ ತಮಿಳು ಮತ್ತು ಪ್ರಾಚೀನ ಕನ್ನಡದಲ್ಲಿ ಅನೇಕ ಸಮಾನ ಭಾಷಿಕ ಅಂಶಗಳಿರುವುದರಿಂದ ಮೂಲ ರೂಪದಲ್ಲೇ ಪದ್ಯ ಸ್ವರೂಪವನ್ನು ಕನ್ನಡಕ್ಕಳವಡಿಸಿದೆ." ಆಕರ್ಷಕ ರೀತಿಯಲ್ಲಿ ತಿರುಪ್ಪಾವೈಯನ್ನು ಕನ್ನಡಕ್ಕಿತ್ತಿರುವ ಪ್ರೊ|| ಗೀತಾಚಾರ್ಯರು ಅಭಿನಂದನಾರ್ಹರು.

■



# ಗ್ರಂಥ ಸ್ವೀಕಾರ

**1. ಹೃದಯ ಸಂಪನ್ನತೆ (ಭಾರತೀಯ ಸಂಸ್ಕೃತಿ ಮಾಲೆ) :** ಲೇಖಕರು : ಪ್ರೊ॥ ಆರ್.ಕೆ. ಶ್ರೀಕಂಠಕುಮಾರಸ್ವಾಮಿ, ಪ್ರಕಾಶಕರು : ಸಮುದಾಯ, ಅಧ್ಯಯನ ಕೇಂದ್ರ, ಮೈಸೂರು, ಪ್ರಕಟಣೆ : ಪ್ರಥಮ ಮುದ್ರಣ 2000, ಬೆಲೆ ರೂ. 50/-

**2. ಭಕ್ತ ಶಿರೋಮಣಿ ಶ್ರೀ ಆಂಜನೇಯ (ಲೇಖನ ಸ್ತೋತ್ರ ಸಂಗ್ರಹ)** ಲೇಖಕರು: ಟಿ.ವಿ. ವೆಂಕಟರಮಣಯ್ಯ, ಪ್ರಕಾಶಕರು : ಟಿ.ವಿ. ವೆಂಕಟರಮಣಯ್ಯ, ಪ್ರಕಟಣೆ : ಪ್ರಥಮ ಮುದ್ರಣ,2002, ಬೆಲೆ ರೂ. 30/-

**3. ಮುನಿವಾಹನ ಅನುವಾದ ಡಾ॥ ಆರ್. ಶೇಷಶಾಸ್ತ್ರಿ (ತೆಲುಗು ನಾಟಕ)** ಲೇಖಕರು : ಆಚಾರ್ಯ ಕೊಲಕಲೂರಿ ಇನಾಕ್, ಪ್ರಕಾಶಕರು: ಜ್ಯೋತಿ ಗ್ರಂಥಮಾಲಾ, ಅನಂತಪುರಂ, ಪ್ರಕಟಣೆ: ಪ್ರಥಮ ಮುದ್ರಣ 2002, ಬೆಲೆ ರೂ. 45/-

**4. ದವಳ (ನಾಲ್ಕು ನೀಳ್ಗತೆಗಳು) :** ಲೇಖಕರು : ನಳಿನಾ ಶ್ರೀರಾಘವನ್, ಪ್ರಕಾಶಕರು: ಮಾಸ್ತಿ ಅಧ್ಯಯನ ಪೀಠ, ಪ್ರಕಟಣೆ : ಪ್ರಥಮ ಮುದ್ರಣ 2001, ಬೆಲೆ ರೂ. 70/-

**5. ನಂದಿನಿ (ಕಥಾಗುಚ್ಛ)** ಲೇಖಕರು : ನಳಿನಾ ಶ್ರೀರಾಘವನ್, ಪ್ರಕಾಶಕರು: ಮಾಸ್ತಿ ಅಧ್ಯಯನ ಪೀಠ, ಪ್ರಕಟಣೆ : ಪ್ರಥಮ ಮುದ್ರಣ 2001, ಬೆಲೆ ರೂ. 80/-

**6. ಸಂಕಲ್ಪಸಿದ್ಧಿ (ಕಾವ್ಯ)** ಲೇಖಕರು : ಎಸ್.ಡಿ. ಗುರುಗೋವಿಂದಯ್ಯ, ಪ್ರಕಾಶಕರು: ನರಸಿಂಹ ಪಬ್ಲಿಕೇಷನ್, ಹುರಳೀತೋಟ, ತುಮಕೂರು, ಪ್ರಕಟಣೆ : ಪ್ರಥಮ ಮುದ್ರಣ 2002, ಬೆಲೆ ರೂ. 80/-

**7. ಪರಿವರ್ತನೆ (ಕಾವ್ಯ) :** ಲೇಖಕರು : ಗುರುಗೋವಿಂದ, ಪ್ರಕಾಶಕರು: ನರಸಿಂಹ ಪಬ್ಲಿಕೇಷನ್, 1750, ಚಂದ್ರಕಾಂತ ಬಿಲ್ಡಿಂಗ್, ಹೊರಪೇಟೆ, ತುಮಕೂರು, ಪ್ರಕಟಣೆ : ಪ್ರಥಮ ಮುದ್ರಣ 2002, ಬೆಲೆ ರೂ. 70/-

**8. ಶ್ರಾದ್ಧ (ಭಾರತೀಯ ಸಂಸ್ಕೃತಿಮಾಲೆ)** ಲೇಖಕರು : ಪ್ರೊ॥ ಆರ್.ಕೆ. ಶ್ರೀಕಂಠಕುಮಾರಸ್ವಾಮಿ, ಪ್ರಕಾಶಕರು : ಸಮುದಾಯ, ಅಧ್ಯಯನ ಕೇಂದ್ರ, ಮೈಸೂರು, ಪ್ರಕಟಣೆ : ಪ್ರಥಮ ಮುದ್ರಣ 2002, ಬೆಲೆ ರೂ. 50/-

**9. ಸರಸ್ವತಿ ಕಂಠಾಭರಣ ಕರ್ಲಮಂಗಲಂ ಶ್ರೀಕಂಠಯ್ಯ (ವ್ಯಕ್ತಿ ಚಿತ್ರಣ)** ಲೇಖಕರು: ನಾಗೇಂದ್ರ ಕುಮಾರ್, ಪ್ರಕಾಶಕರು : ಮಾಸ್ತಿ ಅಧ್ಯಯನ ಪೀಠ, ಪ್ರಕಟಣೆ : ಪ್ರಥಮ ಮುದ್ರಣ 2002, ಬೆಲೆ ರೂ. 15/-

**10. ಸಂಕೇತಿ (ಸಂಸ್ಕೃತಿ ಸಮೀಕ್ಷೆ)** ಲೇಖಕರು : ಪ್ರೊ॥ ಪ್ರಣತಾರ್ತಿಹರನ್, ಪ್ರಕಾಶಕರು: ಸಮುದಾಯ, ಅಧ್ಯಯನ ಕೇಂದ್ರ, ಮೈಸೂರು, ಪ್ರಕಟಣೆ : ಪ್ರಥಮ ಮುದ್ರಣ 2002, ಬೆಲೆ ರೂ. 15/-

**11. ಹಲವು ಹನ್ನೊಂದು ಹರಪನಹಳ್ಳಿ (ಪ್ರಬಂಧ)** ಲೇಖಕರು : ಕುಂ.ಬಾ. ಸದಾಶಿವಪ್ಪ, ಪ್ರಕಾಶಕರು: ಮಾಲತೇಶ ಪ್ರಕಾಶನ, ಹರಪನಹಳ್ಳಿ, ಪ್ರಕಟಣೆ : ಪ್ರಥಮ ಮುದ್ರಣ 2002, ಬೆಲೆ ರೂ. 50/-

# ಪ್ರತಿಷ್ಠಾನ ವಾರ್ತೆ

## ೧. ದತ್ತಿ ಕಾರ್ಯಕ್ರಮಗಳು

**1. 22-2-2003 ರಂದು ಅ.ನೇ ಉಪಾಧ್ಯೆ ದತ್ತಿ ಉಪನ್ಯಾಸ :** 'ಅ.ನೇ. ಉಪಾಧ್ಯೆ ಜೀವನ-ಸಾಧನೆ'ಯನ್ನು ಶ್ರೀ ಎಲ್ಲೇಗೌಡ ಬೆಸಗರಹಳ್ಳಿ, ಅವರು ನಡೆಸಿಕೊಟ್ಟರು. ಇದರ ಅಧ್ಯಕ್ಷತೆಯನ್ನು ವೃಷಭೇಂದ್ರ ಮೂರ್ತಿಯವರು ವಹಿಸಿದ್ದರು. ಈ ಕಾರ್ಯಕ್ರಮ ಬೆಂಗಳೂರು ಗ್ರಾಮಾಂತರ ಜಿಲ್ಲಾ ಗಮಕ ಪರಿಷತ್ತಿನ ಸಹಯೋಗದಲ್ಲಿ ಕನಕಪುರದಲ್ಲಿ ನಡೆಯಿತು.

**2. 27-2-2003 ರಂದು ಡಾ|| ಶಾಂತಾ ಪ್ರಭುಶಂಕರ ದತ್ತಿ ಉಪನ್ಯಾಸ :** 'ಮಹಿಳೆಯರ ಆರೋಗ್ಯ' ವಿಷಯವಾಗಿ ಡಾ|| ಎಸ್. ಲತಾ ಅವರಿಂದ ನಡೆಯಿತು. ಅಧ್ಯಕ್ಷತೆಯನ್ನು ಸಾಹಿತಿಗಳೂ, ವೈದ್ಯರೂ ಆದ ಡಾ|| ಎಂ. ಎಲ್. ಲಲಿತಮ್ಮ ಅವರು ವಹಿಸಿದ್ದರು. 'ಶಾರದಾ ಕುಟೀರ'ದಲ್ಲಿ ಅದರ ಸಹಯೋಗದೊಂದಿಗೆ ಈ ಕಾರ್ಯಕ್ರಮ ನಡೆಯಿತು.

**3. 28-2-2003 ರಂದು ಡಾ|| ಎಂ. ಎ. ಜಯಚಂದ್ರ ದತ್ತಿ ಉಪನ್ಯಾಸ:** 'ಕೊಂಡಕುಂದಾಚಾರ್ಯರು - ಒಂದು ಪರಿಚಯ'ವನ್ನು ಪ್ರಸಿದ್ಧ ವಿದ್ವಾಂಸರಾದ ಮೈಸೂರಿನ ಸೀತಾರಾಮ ಜಾಗೀರದಾರ್ ಅವರು ನೀಡಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು.

**4. 28-3-2003 ರಂದು ಸೋಸಲೆ ಅಯ್ಯಾಶಾಸ್ತ್ರಿ ಸ್ಮಾರಕ ದತ್ತಿ ಉಪನ್ಯಾಸ :** 'ಸೋಸಲೆ ಗರಳಪುರೀ ಶಾಸ್ತ್ರೀಗಳ ಸಂಸ್ಕೃತ ಗ್ರಂಥಗಳು' ವಿಷಯದ ಬಗ್ಗೆ ಮೈಸೂರಿನ ಓ.ಆರ್.ಐ.ನ ನಿವೃತ್ತ ವಿದ್ವಾಂಸರಾದ ವಿದ್ವಾನ್ ಶ್ರೀ ಹೆಚ್.ವಿ. ನಾಗರಾಜರಾವ್ ಅವರು ನಡೆಸಿಕೊಟ್ಟರು. ಅಧ್ಯಕ್ಷತೆಯನ್ನು ದತ್ತಿದಾನಿಗಳೂ ಪ್ರಸಿದ್ಧ ವಿದ್ವಾಂಸರೂ ಆದ ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ ಅವರು ವಹಿಸಿದ್ದರು.

**5. 26-8-03, ಐತಿಹಾಸಿಕರತ್ನ ಎಸ್. ಶ್ರೀಕಂಠಯ್ಯ ಸ್ಮಾರಕ ದತ್ತಿಉಪನ್ಯಾಸ** 'ಬೆಂಗಳೂರು ಒಂದು ಚಾರಿತ್ರಿಕ ದೃಷ್ಟಿ' ಕುರಿತು ಡಾ|| ಎಚ್.ಎಸ್. ಗೋಪಾಲರಾವ್‌ರವರು ಉಪನ್ಯಾಸ ನಡೆಸಿಕೊಟ್ಟರು. ಅಧ್ಯಕ್ಷತೆ : ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ, ಮುಖ್ಯ ಅತಿಥಿ: ಶ್ರೀ ಕೆ. ಚಂದ್ರಮೌಳಿ ಅವರು ಭಾಗವಹಿಸಿದ್ದರು.

**6. 9-9-03, ಎಂ.ವಿ.ಸೀ ಕನ್ನಡ ದತ್ತಿ ಕಾರ್ಯಕ್ರಮ:** *ಕನ್ನಡ ಚಳವಳಿ - ಚಿಂತನಗೋಷ್ಠಿ* ಮತ್ತು 'ಕನ್ನಡ ಚಿರಂಜೀವಿ' ಪ್ರಶಸ್ತಿ ಪ್ರದಾನ : ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು. ಪ್ರತಿಕ್ರಿಯೆ ಡಾ|| ಜಿ. ರಾಮಕೃಷ್ಣ, ಪ್ರೊ|| ರವೀಂದ್ರ ರೇಶ್ಮೆ ಡಾ|| ಪಿ.ವಿ. ನಾರಾಯಣ, ಪ್ರೊ|| ಚಿ. ಶ್ರೀನಿವಾಸರಾಜು ಡಾ|| ಜೆ. ಶ್ರೀನಿವಾಸಮೂರ್ತಿ ಅವರುಗಳು ಪ್ರತಿಕ್ರಿಯೆ ನೀಡಿದರು. ಕನ್ನಡ ಗೆಳೆಯರ ಬಳಗದ ಸಹಕಾರದಲ್ಲಿ ಈ ಕಾರ್ಯಕ್ರಮ ನಡೆಯಿತು

**7. 20-9-03, ಬೇಟೇರಾಯ ದೀಕ್ಷಿತ ದತ್ತಿ ಕಾರ್ಯಕ್ರಮ:** 'ದೀಕ್ಷಿತರ ಸಾರಂಗಧರ ನಾಟಕ ಒಂದು ಪರಿಚಯ' ಕುರಿತು ಶ್ರೀಮತಿ ಸಾವಿತ್ರಮ್ಮ ರಾಮಸ್ವಾಮಿ ಉಪನ್ಯಾಸ ನೀಡಿದರು. ಎಚ್.ವಿ. ಶ್ರೀನಿವಾಸ ಶರ್ಮಾ ಅಧ್ಯಕ್ಷತೆ ವಹಿಸಿದ್ದರು. ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದಲ್ಲಿ ಈ ಕಾರ್ಯಕ್ರಮ ನಡೆಯಿತು.

8. ಪ್ರೊ।। ತೀ. ನಂ. ಶ್ರೀಕಂಠಯ್ಯ ಸ್ಮಾರಕ ಪ್ರಥಮ ದತ್ತಿಕಾರ್ಯಕ್ರಮ

ದಿನಾಂಕ 26-11-2003 ರಂದು ಬಿ.ಎಂ.ಶ್ರೀ. ಕಲಾಭವನದಲ್ಲಿ ನಡೆದ ಈ ಕಾರ್ಯಕ್ರಮದ ಉದ್ಘಾಟನೆಯನ್ನು ಖ್ಯಾತ ಸಂಶೋಧಕ ಡಾ।। ಎಂ. ಚಿದಾನಂದಮೂರ್ತಿಯವರು ನೆರವೇರಿಸುತ್ತ ಪ್ರೊ।। ತೀ. ನಂ. ಶ್ರೀ ರವರ ಬಗ್ಗೆ ಪ್ರಥಮ ದತ್ತಿಉಪನ್ಯಾಸ ನೀಡಿದರು. ಡಾ।। ಟಿ.ವಿ. ವೆಂಕಟಾಚಲಶಾಸ್ತ್ರೀಗಳು ಅಧ್ಯಕ್ಷತೆ ವಹಿಸಿದ್ದರು. ಪ್ರೊ।। ಡಿ. ಲಿಂಗಯ್ಯನವರು ಸ್ವಾಗತಿಸಿದರು. ಪ್ರೊ।। ನಾ. ಗೀತಾಚಾರ್ಯ ವಂದಿಸಿದರು. ದಾನಿಗಳಾದ ಪ್ರೊ. ತೀ.ಶ್ರೀ ನಾಗಭೂಷಣ, ಶ್ರೀ ಎನ್. ಬಸವಾರಾಧ್ಯ, ಚಿ.ವಿ. ಶ್ರೀನಾಥಶಾಸ್ತ್ರಿಗಳು ಉಪಸ್ಥಿತರಿದ್ದರು.

ಚಿ.ವಿ. ಶ್ರೀನಾಥಶಾಸ್ತ್ರಿ 5000-00, ತೀ.ಶ್ರೀ ನಾಗಭೂಷಣ 5,000-00, ಮತ್ತು ಎನ್. ಬಸವಾರಾಧ್ಯ 1,000-00ರೂ.ಗಳನ್ನು ನೀಡಿದ್ದು ಈವರೆಗೆ ಈ ದತ್ತಿನಿಧಿಯಲ್ಲಿ ಒಟ್ಟು 11,000-00 ರೂ.ಗಳ ಸಂಗ್ರಹವಾಗಿದೆ. ಇದನ್ನು 25 ಸಾವಿರ ರೂಪಾಯಿಗಳನ್ನಾಗಿ ಮಾಡುವ ಉದ್ದೇಶವಿದ್ದು ಅಭಿಮಾನಿಗಳು ಮುಂದೆ ಬರಬೇಕಾಗಿ ವಿನಂತಿಸಲಾಗಿದೆ. ಪ್ರೊ।। ತೀ.ನಂ.ಶ್ರೀ. ರವರ ಪುತ್ರರಾದ ಪ್ರೊ. ತೀ.ಶ್ರೀ. ನಾಗಭೂಷಣರವರು 5,000-00 ರೂಪಾಯಿಗಳನ್ನು ಈ ದತ್ತಿ ಕಾರ್ಯಕ್ರಮದ ವೆಚ್ಚಕ್ಕೆ ಮತ್ತು ತಾವು ನೀಡಿರುವ ತೀ.ನಂ.ಶ್ರೀ ಪುಸ್ತಕಗಳ ಬೈಂಡಿಂಗ್‌ಗಳಿಗೆ ಈ ಕಾರ್ಯಕ್ರಮದಲ್ಲಿ ಪ್ರತಿಷ್ಠಾನಕ್ಕೆ ನೀಡಿದರು.

## 2. ರಜತೋತ್ಸವ ಕಾರ್ಯಕ್ರಮಗಳು

23-3-2004 ರಂದು ನಡೆದ ಪ್ರತಿಷ್ಠಾನದ ಕಾರ್ಯಸಮಿತಿ ಸಭೆಯಲ್ಲಿ ರಜತೋತ್ಸವ ಆಚರಣೆಯ ರೂಪರೇಖೆಗಳನ್ನು ಸಿದ್ಧಪಡಿಸಲಾಯಿತು. ಯೋಜನೆಯ ವಿವರಗಳನ್ನು ತಿಳಿಸಲು 17-4-2003, 3-5-2003 ದಿನಾಂಕಗಳಂದು ಸಮಿತಿ ಸಭೆಗಳು ನಡೆದವು.

**1. ಸಭೆಗಳು :** 7-5-2003 ರಂದು ಈ ಸಂಬಂಧದ ಪತ್ರಿಕಾಗೋಷ್ಠಿಯನ್ನು ನಡೆಸಲಾಯಿತು. ಪತ್ರಿಕಾಗೋಷ್ಠಿಯಲ್ಲಿ ಡಾ।। ಟಿ.ವಿ. ವೆಂಕಟಾಚಲಶಾಸ್ತ್ರೀ, ಡಾ।। ಎಂ.ಎಲ್. ಲಲಿತಮ್ಮ ಪ್ರೊ।। ಡಿ. ಲಿಂಗಯ್ಯ, ನಾ. ಗೀತಾಚಾರ್ಯ ಅವರುಗಳು ಹಾಜರಿದ್ದರು.

**2. ರಜತೋತ್ಸವ ಉದ್ಘಾಟನಾ ಕಾರ್ಯಕ್ರಮ :** ಮೇ 6, 2003 ರಂದು ರಜತೋತ್ಸವ ವರ್ಷದ ಉದ್ಘಾಟನಾ ಕಾರ್ಯಕ್ರಮವು ಬಿ.ಎಂ.ಶ್ರೀ. ಕಲಾಭವನದಲ್ಲಿ ನೂತನವಾಗಿ ನಿರ್ಮಾಣವಾಗಿರುವ ಎಂ.ವಿ.ಸೀ. ಸಭಾಂಗಣದಲ್ಲಿ ನಡೆಯಿತು. ಇದರ ಅಂಗವಾಗಿ **ರಜತೋತ್ಸವ ಪುಸ್ತಕ ಮತ್ತು ಹಸ್ತಪ್ರತಿ ಪ್ರದರ್ಶನ ಉದ್ಘಾಟನೆ ಹಾಗೂ ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿ ವಿತರಣೆ ಕಾರ್ಯಕ್ರಮ** ನಡೆಯಿತು. ಬೆಂಗಳೂರು ಮಹಾನಗರ ಪಾಲಿಕೆಯ ಆರ್ಥಿಕ ಸ್ಥಾಯಿ ಸಮಿತಿ ಅಧ್ಯಕ್ಷರಾದ ಶ್ರೀ ಕೃಷ್ಣಪ್ಪ ಅವರು ಉದ್ಘಾಟನೆ ಮಾಡಿದರು. ನಗರಪಾಲಿಕೆಯಿಂದ ವಾರ್ಷಿಕ 10,000-00 ರೂ.ಗಳ ಅನುದಾನವನ್ನು ಬಿಡುಗಡೆ ಮಾಡಲಾಗುವುದು ಎಂದು ತಿಳಿಸುತ್ತ ಪ್ರತಿಷ್ಠಾನದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿ ವಿತರಣೆಯನ್ನು ಪ್ರೊ।। ಎಲ್.ಎಸ್. ಶೇಷಗಿರಿರಾವ್ ಅವರು ಮಾಡಿದರು.

ಗುಲ್ಬರ್ಗದ ಶ್ರೀಮತಿ ಜಯಶ್ರೀದಂಡೆ ಅವರು ತಮ್ಮ 'ಫಲದೊಳಗಣ ರುಚಿ' ಕೃತಿಗಾಗಿ ಪ್ರಶಸ್ತಿ ಸ್ವೀಕರಿಸಿದರು. ಮುಖ್ಯ ಅತಿಥಿಗಳಾದ ಡಾ|| ಎಂ. ಚಿದಾನಂದಮೂರ್ತಿ ಅವರು ಮತ್ತು ನಗರಪಾಲಿಕೆ ಸದಸ್ಯರಾದ ಶ್ರೀ ಬಿ.ಎಸ್. ಸತ್ಯನಾರಾಯಣ ಭಾಗವಹಿಸಿದ್ದರು. ಬಿ.ಎಂ.ಶ್ರೀ. ಪ್ರತಿಷ್ಠಾನ ರಜತೋತ್ಸವ ಕಾಣುತ್ತಿರುವುದು ಸಂಸ್ಥಾಪಕ ಎಂ.ವೀ. ಸೀತಾರಾಮಯ್ಯನವರ ಫಲವಾಗಿದ್ದು ಇದರ ಯಶಸ್ಸು ಹೀಗೆ ವೃದ್ಧಿಸುತ್ತಿರಲಿ ಎಂದು ಅತಿಥಿಗಳು ಹಾರೈಸಿದರು.

**3. ರಜತೋತ್ಸವ ಕವಿಗೋಷ್ಠಿಗಳು :** ರಜತೋತ್ಸವ ಸಂದರ್ಭದಲ್ಲಿ ಸಹೃದಯಗೋಷ್ಠಿಯ ವತಿಯಿಂದ ರಜತೋತ್ಸವ ಕವಿಗೋಷ್ಠಿಗಳನ್ನು ನಡೆಸಲು ನಿರ್ಧರಿಸಲಾಗಿದ್ದು ಈವರೆಗೆ 28-8-03, 29-11-03 ದಿನಾಂಕಗಳಂದು ಈ ಕವಿಗೋಷ್ಠಿಗಳು ನಡೆದಿವೆ.

**4. 'ಸಿರಿಕಂಟ'ದ ಕಾರ್ಯಕ್ರಮಗಳು : ಹಸ್ತಪ್ರತಿ ಸೇವಾಕೇಂದ್ರ-** ರಜತೋತ್ಸವ ವಿಶೇಷ ಕಾರ್ಯಕ್ರಮವಾಗಿ ಪ್ರತಿಷ್ಠಾನದ ಹಸ್ತಪ್ರತಿ ವಿದ್ಯಾರ್ಥಿ ವೇದಿಕೆಯಾದ 'ಸಿರಿಕಂಟ'ದಿಂದ ಎರಡು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಮೊದಲನೆಯದಾದ 'ಹಸ್ತಪ್ರತಿ ಸೇವಾಕೇಂದ್ರ' ಎಂಬ ಹಸ್ತಪ್ರತಿ ಕ್ಲಿನಿಕ್ ರಜತೋತ್ಸವ ಉದ್ಘಾಟನೆಯಂದೇ ಆರಂಭವಾಗಿದ್ದು ಇದರ ಮೂಲಕ ಹಸ್ತಪ್ರತಿಗಳನ್ನು ವೈಜ್ಞಾನಿಕವಾಗಿ ಸಂರಕ್ಷಿಸಿ-ಸಂಪ್ರತಿ ಮಾಡಿಕೊಡಲಾಗುತ್ತಿದೆ.

**5. ಮನೆಬಾಗಿಲಿಗೆ ಹಸ್ತಪ್ರತಿ ದರ್ಶನ :** ಕರ್ನಾಟಕದಾದ್ಯಂತ ಯಾವುದೇ ಸಂಘ ಸಂಸ್ಥೆ, ಶಾಲೆ, ಕಾಲೇಜುಗಳು ಆಹ್ವಾನಿಸಿದರೂ ಅವರಲ್ಲಿಗೆ ಹೋಗಿ ಪ್ರಾಚೀನ ಹಸ್ತಪ್ರತಿಗಳನ್ನು ಪ್ರದರ್ಶಿಸಿ, ಅವರ ಮನೆಬಾಗಿಲಿಗೆ ಈ ಅಪರೂಪದ ಪ್ರದರ್ಶನವನ್ನು ಕೊಂಡೊಯ್ದು, ಅವರಲ್ಲಿ ಇದರ ಬಗ್ಗೆ ಜಾಗೃತಿ ಮೂಡಿಸುವುದು ಇದರ ಮುಖ್ಯ ಉದ್ದೇಶ. ಈವರೆಗೆ ಈ ಕೆಳಕಂಡ ಕಡೆಗಳಲ್ಲಿ ಈ ಪ್ರದರ್ಶನವನ್ನು ನಡೆಸಲಾಗಿದೆ.

**ಬೆಂಗಳೂರಿನಲ್ಲಿ ನಡೆದ ಹಸ್ತಪ್ರತಿ ಪ್ರದರ್ಶನಗಳು**

| ಕ್ರ.ಸಂ. | ದಿನಾಂಕ | ಸ್ಥಳ | ಆಹ್ವಾನಿಸಿದ ಸಂಸ್ಥೆ |
|---|---|---|---|
| 1 | 19/10/03 | ಕೆಂಗೇರಿ | ಗಮಕ ಸಂಘ |
| 2 | 5-6/12/03 | ರಾಜಾಜಿನಗರ | ಬಸವೇಶ್ವರ ಕಾಲೇಜು |
| 3 | 6/2/04 | ವಿಜಯನಗರ | ಬಸವೇಶ್ವರ ಪದವಿಪೂರ್ವ ಕಾಲೇಜು |
| 4 | 13/2/04 | ಕೆ.ಆರ್. ಮಾರುಕಟ್ಟೆ | ವಾಣಿವಿಲಾಸ ಹೈಸ್ಕೂಲ್ |

**ಬೆಂಗಳೂರಿನಿಂದ ಹೊರಗಡೆ ನಡೆದ ಹಸ್ತಪ್ರತಿ ಪ್ರದರ್ಶನ.**

| | | | |
|---|---|---|---|
| 1 | 10/12/03 | ಬೆಳ್ಳೂರು | ಕವಿನಯನ ಪ್ರವಾಸ ತಂಡ |
| 2 | 10/12/03 | ದೇವನೂರು ಚಿಕ್ಕಮಗಳೂರು ಜಿಲ್ಲೆ | ಕವಿನಯನ ಪ್ರವಾಸ ತಂಡ |
| 3 | 11/12/03 | ಬನವಾಸಿ ಮಧುಕೇಶ್ವರ ದೇವಸ್ಥಾನ | ಕವಿನಯನ ಪ್ರವಾಸ ತಂಡ |
| 4 | 12/12/03 | ಕಾಗಿನೆಲೆ | ಕವಿನಯನ ಪ್ರವಾಸ ತಂಡ |

| | | | |
|---|---|---|---|
| 5 | 12/12/03 | ಶಿಶುವಿನಹಾಳ | ಕವಿನಯನ ಪ್ರವಾಸ ತಂಡ |
| 6 | 12/12/03 | ಗದಗ ವೀರನಾರಾಯಣನ ಗುಡಿ | ಕವಿನಯನ ಪ್ರವಾಸ ತಂಡ |
| 7 | 14/12/03 | ಐಹೊಳೆ | ಕವಿನಯನ ಪ್ರವಾಸ ತಂಡ |
| 8 | 10-12/2/04 | ಹೂವಿನ ಹಡಗಲಿ | ತುಂಗಭದ್ರ ಪ್ರೌಢಶಾಲೆ |

**6. ಹಸ್ತಪ್ರತಿಶಾಸ್ತ್ರ ಕಾರ್ಯಗಾರ :** ಕನ್ನಡ ಸಂಸ್ಕೃತಿ ಇಲಾಖೆಯ ಸಹಯೋಗದೊಡನೆ 15-9-03 ರಿಂದ 20-9-03ರ ವರೆಗೆ ಪ್ರತಿಷ್ಠಾನದ ಸಭಾಂಗಣದಲ್ಲಿ ಹಸ್ತಪ್ರತಿಶಾಸ್ತ್ರ ಕಾರ್ಯಗಾರವನ್ನು ನಡೆಸಲಾಯಿತು. 15-9-03 ರಂದು ಅವರು ಉದ್ಘಾಟನೆ ಮಾಡಿದ ಸಂದರ್ಭದಲ್ಲಿ 23 ಶಿಬಿರಾರ್ಥಿಗಳು ರಾಜ್ಯದ ಬೇರೆ ಬೇರೆ ಭಾಗಗಳಿಂದ ಆಗಮಿಸಿದ್ದರು. ಪ್ರೊ॥ ನಾ. ಗೀತಾಚಾರ್ಯ ಮತ್ತು ಶ್ರೀ ಜಿ.ಎಸ್.ಎನ್. ರಾವ್ ಅವರ ಮಾರ್ಗದರ್ಶನದಲ್ಲಿ ನಡೆದ ಈ ವಿಶೇಷ ಶಿಬಿರದಲ್ಲಿ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ, ಎನ್. ಬಸವಾರಾಧ್ಯ, ಎನ್. ರಮ್ಯ, ಡಾ॥ ಕೆ.ಆರ್. ಗಣೇಶ್, ಶ್ರೀಮತಿ ಭಾರತಿ, ಶ್ರೀ ಧೀರೇಂದ್ರ ಅವರುಗಳು ವಿಶೇಷ ಉಪನ್ಯಾಸಗಳನ್ನು ನೀಡಿದರು. ಕೊನೆ ದಿನ ನಡೆದ ಸಮಾರೋಪ ಸಮಾರಂಭದಲ್ಲಿ ಶ್ರೀ ವೆಂ. ಶ್ರೀನಿವಾಸರವರು ಶಿಬಿರಾರ್ಥಿಗಳಿಗೆ ಅರ್ಹತಾ ಪತ್ರಗಳನ್ನು ವಿತರಣೆ ಮಾಡಿದರು.

ಶಿಬಿರಾರ್ಥಿಗಳು ಇದೊಂದು ಅತ್ಯುಪಯುಕ್ತ ಕಾರ್ಯಕ್ರಮವಾಗಿದ್ದು ನಮ್ಮ ಸಂಸ್ಕೃತಿಯ ಮೂಲ ಆಕರಗಳ ಬಗ್ಗೆ ಕಾಳಜಿ ವಹಿಸುತ್ತಿರುವ ಪ್ರತಿಷ್ಠಾನ ನಿಜಕ್ಕೂ ಉಪಯುಕ್ತ ಕಾರ್ಯಕ್ರಮವನ್ನು ನಡೆಸಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು. ಶ್ರೀ ಪ್ರಭಂಜನಾಚಾರ್, ಶ್ರೀ ಚಿತ್ತಾಗಾರ್, ಶ್ರೀ ಹೆಚ್.ಜಿ. ಪಾಟೀಲ ಮುಂತಾದವರು ನಾಡಿನ ಬೇರೆ ಬೇರೆ ಭಾಗಗಳಿಂದ ಆಗಮಿಸಿ ಈ ಶಿಬಿರದ ಲಾಭ ಪಡೆದರು.

## ಇತರೆ ಕಾರ್ಯಕ್ರಮಗಳು

**1. ರಘುಸುತ ಶ್ರದ್ಧಾಂಜಲಿ :** 24-2-2003 ರಂದು ದಿವಂಗತ ವಿದ್ವಾನ್ ರಘುಸುತರಿಗೆ ಶ್ರದ್ಧಾಂಜಲಿ ಕಾರ್ಯಕ್ರಮವನ್ನು ಕರ್ನಾಟಕ ಲೇಖಕರ ಸಂಘದ ಸಹಯೋಗದಲ್ಲಿ ನಡೆಸಲಾಯಿತು. ಸಂಘದ ಅಧ್ಯಕ್ಷರಾದ ಪ್ರೊ॥ ಡಿ. ಲಿಂಗಯ್ಯನವರು ಪ್ರಾಸ್ತಾವಿಕ ಮಾತನಾಡುತ್ತಾ ರಘುಸುತರ ಸಾಧನೆಗಳನ್ನೂ ಸಂಘದೊಂದಿಗೆ ಅವರಿಗಿದ್ದ ನಿಕಟ ಸಂಪರ್ಕವನ್ನೂ ಸ್ಮರಿಸಿದರು. ಅಧ್ಯಕ್ಷತೆಯನ್ನು ವಹಿಸಿದ್ದ ಅಧ್ಯಕ್ಷರಾದ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ರಘುಸುತರೊಂದಿಗಿನ ನೆನಪುಗಳನ್ನು ಹಂಚಿಕೊಂಡರು. ಶ್ರೀಮತಿ ಕೆ. ಆರ್. ಪದ್ಮಜೆ ರಘುಸುತ, ಶ್ರೀ ಎನ್. ಬಸವಾರಾಧ್ಯ, ಪ್ರೊ॥ ನಾ. ಗೀತಾಚಾರ್ಯ, ಶ್ರೀ ತಿರುಮಲೆ ರಂಗಾಚಾರ್ಯ, ಶ್ರೀ ಜ್ಞಾನಾನಂದ ಅವರುಗಳು ರಘುಸುತರ ವಿವಿಧ ಕ್ಷೇತ್ರಗಳ ಸೇವೆಯನ್ನು ಸ್ಮರಿಸುತ್ತ ಭಾವಪೂರ್ಣ ಶ್ರದ್ಧಾಂಜಲಿಯನ್ನು ಅರ್ಪಿಸಿದರು.

ರಘುಸುತರದ್ದು ಬಹುಮುಖಿ ಪ್ರತಿಭೆಯಾಗಿದ್ದು ಅವರ ಸಾಹಿತ್ಯ ಸಾಧನೆಗಳನ್ನು ಸರಿಯಾದ ರೀತಿಯಲ್ಲಿ ಗುರುತಿಸದೇ ಹೋದುದರಿಂದ ಅವರು ಯಾವುದೇ ಪ್ರಮುಖ ಪ್ರಶಸ್ತಿಗೆ ಭಾಜನರಾಗಲಿಲ್ಲವಾದ್ದರಿಂದ ಈ ಸಂದರ್ಭದಲ್ಲಾದರೂ ಅವರ ಸಾಧನೆಗಳನ್ನು ಸ್ಪಷ್ಟವಾಗಿ ದಾಖಲಿಸುವ ಪ್ರಯತ್ನವಾಗಬೇಕೆಂದು ಸಭೆ ಅಭಿಪ್ರಾಯಪಟ್ಟಿತು. ಕಾರ್ಯಕ್ರಮದಲ್ಲಿ ಒಂದುನಿಮಿಷದ ಮೌನ ಆಚರಿಸಿ ಸಭೆ ಮೃತರ ಆತ್ಮಕ್ಕೆ ಶಾಂತಿ ಕೋರಿತು.

**2. 29-8-03, ಶ್ರದ್ಧಾಂಜಲಿ ಕಾರ್ಯಕ್ರಮ:** ಕೀರ್ತಿನಾಥ ಕುರ್ತಕೋಟಿ, ಬಿ.ಟಿ. ಸಾಸನೂರು, ಎ. ಎನ್. ಮೂರ್ತಿರಾವ್ ಅವರುಗಳಿಗೆ ಶ್ರದ್ಧಾಂಜಲಿ ಅರ್ಪಿಸಲಾಯಿತು. ಡಾ।। ಟಿ.ವಿ. ವೆಂಕಟಾಚಲಶಾಸ್ತ್ರೀ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಡಾ।। ಸುಮತೀಂದ್ರ ನಾಡಿಗ, ಡಾ।। ನರಹಳ್ಳಿ ಬಾಲಸುಬ್ರಹ್ಮಣ್ಯ, ಡಾ।। ಎಸ್.ಆರ್. ರೋಹಿಡೆಕರ್ ಅವರುಗಳು ದಿವಂಗತರನ್ನು ಕುರಿತು ಮಾತನಾಡಿದರು. ವಿಶೇಷವಾಗಿ ಶತಾಯುಷಿ ಎ.ಎನ್. ಮೂರ್ತಿರಾಯರನ್ನು ಸ್ಮರಿಸಲಾಯಿತು.

**3. ಹಸ್ತಪ್ರತಿಶಾಸ್ತ್ರ ತರಗತಿ :** ಪ್ರತಿವರ್ಷದಂತೆ ಈ ವರ್ಷವೂ ಸರಸ್ವತಿ ಪೂಜೆಯ ದಿನದಂದು 8-10-03 ರಂದು ತರಗತಿಯ ಉದ್ಘಾಟನೆಯಾಯಿತು. 20 ವಿದ್ಯಾರ್ಥಿಗಳು ಈ ಬಾರಿಯ ತರಗತಿಗೆ ನೋಂದಣಿ ಮಾಡಿಸಿದ್ದಾರೆ. ಇಲ್ಲಿಂದ ಮೂರು ದಿನಗಳವರೆಗೆ ಹಸ್ತಪ್ರತಿಗಳ ಪ್ರದರ್ಶನವನ್ನು ನಡೆಸಲಾಯಿತು.

**4. 23-9-03 ಪುಸ್ತಕ ಬಿಡುಗಡೆ ಕಾರ್ಯಕ್ರಮ:** ಎಂ. ಗೋವಿಂದರಾಜು ಅವರ 'ಕನ್ನಡ ಕಣ್ಮಣಿಗಳ್ ಎಳುವರ್' ಮತ್ತು ಪ್ರೊ।। ನಾ. ಗೀತಾಚಾರ್ಯ ಅವರ 'ಕನ್ನಡ ತಿರುಪ್ಪಾವೈ' ಎಂಬ ಎರಡು ವಿಶಿಷ್ಟ ಪುಸ್ತಕಗಳನ್ನು ಬಿಡುಗಡೆ ಮಾಡಲಾಯಿತು. ಡಾ।। ಜಿ.ಎಸ್.ಆರ್. ಕೃಷ್ಣನ್, ಶ್ರೀಮತಿ ಎಚ್.ಎಸ್. ಪಾರ್ವತಿ, ಡಾ।। ವಿಜಯ ಸುಬ್ಬರಾಜ್, ಡಾ।। ಇ. ಸುಂದರಮೂರ್ತಿ, ಶ್ರೀ ಸಿದ್ದಯ್ಯ ಅವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಡಾ।। ಎಂ. ಚಿದಾನಂದಮೂರ್ತಿ ಅವರು ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ಅಭಿಮಾನಿಗಳು ಗ್ರಂಥಕರ್ತರನ್ನು ಸನ್ಮಾನಿಸಿದರು.

**5. 18-10-03 ಡಾ।। ಕಮಲಾ ಹಂಪನಾರ ಪುಸ್ತಕ ಬಿಡುಗಡೆ :** ಕನ್ನಡ ಪುಸ್ತಕ ಪ್ರಾಧಿಕಾರದ ಸಹಯೋಗದೊಂದಿಗೆ ನಡೆದ ಕಾರ್ಯಕ್ರಮದಲ್ಲಿ ಡಾ।। ಕಮಲಾ ಹಂಪನಾ ಅವರ ಬದ್ದವಣ ಪುಸ್ತಕವನ್ನು ಪ್ರೊ।। ಎಸ್.ಕೆ. ರಾಮಚಂದ್ರರಾವ್ ಅವರು ಬಿಡುಗಡೆ ಮಾಡಿದರು. ಪುಸ್ತಕ ಕುರಿತು ಪ್ರೊ।। ಶಿವರಾಮಯ್ಯ ಅವರು ಮಾತನಾಡಿದರು. ಡಾ।। ಟಿ.ವಿ. ವೆಂಕಟಾಚಲಶಾಸ್ತ್ರೀ ಅಧ್ಯಕ್ಷತೆ ವಹಿಸಿದ್ದರು. ಪ್ರೊ।। ಮಲ್ಲೇಪುರಂ ಜಿ. ವೆಂಕಟೇಶ್ ಅವರು ಪ್ರಾಸ್ತಾವಿಕ ಮಾತುಗಳನ್ನಾಡಿದರು.

ಜೈನ ಧರ್ಮೀಯರು ಕನ್ನಡಕ್ಕೆ ಸಲ್ಲಿಸಿದ ಕೊಡುಗೆ ಅಪಾರ. ಕನ್ನಡ ಭಾಷೆ, ಸಾಹಿತ್ಯ ಹಾಗೂ ಸಂಸ್ಕೃತಿ ಪೋಷಿಸಿ ಶಿಖರ ಪ್ರಾಯವಾದ ಕೃತಿಗಳನ್ನು ರಚಿಸಿದ್ದಾರೆ ಎಂದ ಪ್ರೊ।। ರಾಮಚಂದ್ರರಾವ್ ಅವರು 'ಬದ್ದವಣ' ಕೃತಿ ಜೈನ ಧರ್ಮದ ಬಗ್ಗೆ ಪ್ರೀತಿ ವಿಶ್ವಾಸ ಗಳಿಸಬಹುದಾದ ಪುಸ್ತಕ ಎಂದು ಅಭಿಪ್ರಾಯಪಟ್ಟರು.

ತಮ್ಮ ಸಾಹಿತ್ಯ ಸಾಧನೆಗೆ ವಿದ್ವತ್‌ಪೂರ್ಣ ಗುರುವೃಂದ ಕಾರಣ ಎಂದು ಪ್ರೊ।। ಕಮಲಾ ಹಂಪನಾ ಹೇಳಿದರು.

ಸಾಹಿತಿ ಹಂ.ಪ. ನಾಗರಾಜಯ್ಯ, ನಾ. ಗೀತಾಚಾರ್ಯ, ಎನ್. ತಿಪ್ಪೇಸ್ವಾಮಿ ಹಾಜರಿದ್ದರು.

## ಸಹೃದಯಗೋಷ್ಠಿ ಕಾರ್ಯಕ್ರಮಗಳು

1. 7-3-2003 ರಂದು 'ಕಿರಾತಾರ್ಜುನೀಯ'ದಲ್ಲಿ ನಿರೂಪಿತವಾಗಿರುವ ರಾಜಧರ್ಮದ ಪ್ರಸ್ತುತತೆ ಕುರಿತು ಉಪನ್ಯಾಸವನ್ನು ಡಾ।। ಎಸ್. ಆರ್. ಲೀಲಾ ಅವರು ನೀಡಿದರು. ಡಾ।। ಸೂರ್ಯನಾಥ ಕಾಮತ್ ಅವರು ಅಧ್ಯಕ್ಷತೆ ವಹಿಸಿದ್ದರು.

2. 4-4-2003 'ಶ್ರೀ ವೈಷ್ಣವ ಸಂಪ್ರದಾಯದಲ್ಲಿ ಲಕ್ಷ್ಮಿಯ ಪರಿಕಲ್ಪನೆ' ಯನ್ನು ಕುರಿತು ಶ್ರೀಮತಿ ವತ್ಸಲಾ ಅಯ್ಯಂಗಾರ್ ಅವರು ಉಪನ್ಯಾಸ ಮಾಡಿದರು. ಶ್ರೀಮತಿ ವಸಂತಲಕ್ಷ್ಮಿಯವರು ಅಧ್ಯಕ್ಷತೆ ವಹಿಸಿದ್ದರು.
3. 2-5-2003 ರಂದು 'ಕೋಲಾರ ಜಿಲ್ಲೆಯ ಶಾಸನಗಳಲ್ಲಿ ಅಜೀವಿಕರು' ವಿಷಯವನ್ನು ಕುರಿತು ಶ್ರೀ ಕೆ.ಆರ್. ನರಸಿಂಹನ್ ಅವರು ಉಪನ್ಯಾಸ ಮಾಡಿದರು. ಪ್ರೊ|| ಎಂ.ಎ. ಜಯಚಂದ್ರ ಅವರು ಅಧ್ಯಕ್ಷತೆ ವಹಿಸಿದ್ದರು.
4. 7-6-2003 ರಂದು 'ಬಳ್ಳಾರಿ ಜಿಲ್ಲೆಯ ಕಾಳಾಮುಖ ಕೇಂದ್ರಗಳು' ವಿಷಯವಾಗಿ ಡಾ|| ಕೆ. ವಸಂತಲಕ್ಷ್ಮಿ ಅವರು ಉಪನ್ಯಾಸ ನೀಡಿದರು. ಡಾ|| ಪಿ.ವಿ. ಕೃಷ್ಣಮೂರ್ತಿ ಅವರು ಅಧ್ಯಕ್ಷತೆ ವಹಿಸಿದ್ದರು.
5. 4-7-03 ರಂದು 'ಮೈಸೂರು ಸಂಸ್ಥಾನದಲ್ಲಿ ಮೇಜರ್ ಸಾಂಕೀ ಅವರ ನೀರಾವರಿ ಯೋಜನೆ' ಕುರಿತು ಡಾ|| ಟಿ.ವಿ. ನಾಗರಾಜ್ ಉಪನ್ಯಾಸ ನೀಡಿದರು. ಅಧ್ಯಕ್ಷತೆಯನ್ನು ಡಾ|| ಸೂರ್ಯನಾಥ್ ಕಾಮತ್ ವಹಿಸಿದ್ದರು.
6. 12-10-03 ರಂದು ಕರ್ನಾಟಕ ಇತಿಹಾಸ ಅಕಾಡೆಮಿಯ ಈ ಮೇಲ್ಕಂಡ ಕಾರ್ಯಕ್ರಮಗಳ ಫಲಶ್ರುತಿ ಕಾರ್ಯಕ್ರಮವನ್ನು ನಡೆಸಿತು. ಅಧ್ಯಕ್ಷತೆ ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ ವಹಿಸಿದ್ದರು. ಫಲಶ್ರುತಿ ಭಾಷಣ ನೀಡಿದವರು: ಡಾ|| ಸೂರ್ಯನಾಥ ಕಾಮತ್, ಡಾ|| ಹೆಚ್.ಎಸ್. ಗೋಪಾಲರಾವ್, ಪ್ರೊ|| ನಾ. ಗೀತಾಚಾರ್ಯ.

ಈ ಎಲ್ಲ ಕಾರ್ಯಕ್ರಮಗಳು ಇತಿಹಾಸ ಅಕಾಡೆಮಿಯ ನಗರ ಜಿಲ್ಲಾ ಘಟಕದ ಸಹಯೋಗದಲ್ಲಿ ಅದರ ಅಧ್ಯಕ್ಷರಾದ ಡಾ|| ಶ್ಯಾಮಲಾ ರತ್ನಕುಮಾರಿ ಅವರ ನೇತೃತ್ವದಲ್ಲಿ ಪ್ರತಿಷ್ಠಾನದ ಸಭಾಂಗಣದಲ್ಲಿ ನಡೆದವು.

## ಪ್ರತಿಷ್ಠಾನದ ಕಾರ್ಯಕ್ರಮಗಳ ಬಗ್ಗೆ ಪತ್ರಿಕಾ ವರದಿಗಳು

### ವಿದ್ಯಾರಣ್ಯರ ಕುರಿತ ಕನ್ನಡ ಗ್ರಂಥ ಬಿಡುಗಡೆ

ಬೆಂಗಳೂರು ಏ. 6 - ರಾಮಚಂದ್ರರಾವ್ ಗುಮಾಸ್ತೆ ಅವರು ಅನುವಾದಿಸಿರುವ 'ವಿದ್ಯಾರಣ್ಯ - ಒಂದು ಚಾರಿತ್ರಿಕ ಅಧ್ಯಯನ' ಕನ್ನಡ ಗ್ರಂಥವನ್ನು ನಿವೃತ್ತ ಮುಖ್ಯ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾಯರು ಇಂದು ಇಲ್ಲಿ ಬಿಡುಗಡೆ ಮಾಡಿದರು.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಾಗೂ ಹಿಂದೂ ಧರ್ಮ ಪ್ರಚಾರ ಮಂಡಳಿ ಆಯೋಜಿಸಿದ್ದ ಸಮಾರಂಭದಲ್ಲಿ ಈ ಅನುವಾದ ಗ್ರಂಥ ಬಿಡುಗಡೆ ಮಾಡಿದ ಅವರು, ಡಿ.ವಿ. ಗುಂಡಪ್ಪ ಅವರು ಸಹ ವಿದ್ಯಾರಣ್ಯರನ್ನು ಕುರಿತು ಪುಸ್ತಕ ಬರೆಯಲು ಸಾಕಷ್ಟು ಕೆಲಸ ಮಾಡಿ, ಸಾಮಗ್ರಿಗಳನ್ನು ಒದಗಿಸಿಕೊಂಡಿದ್ದರು. ಆದರೆ ಪುಸ್ತಕ ಬರೆಯಲು ಸಾಧ್ಯವಾಗಲಿಲ್ಲ ಎಂದರು.

ಈ ಗ್ರಂಥದ ಮೂಲ ಲೇಖಕರಾದ ಗಡಿಯಾರಂ ರಾಮಕೃಷ್ಣ ಶರ್ಮ ಅವರು ಸಾಕಷ್ಟು ಸಂಶೋಧನೆ ಮಾಡಿ ಗ್ರಂಥ ರಚಿಸಿದ್ದಾರೆ ಎಂದು ಹೇಳಿದರು.

ಗ್ರಂಥವನ್ನು ಕುರಿತು ಮಾತನಾಡಿದ ಸಂಶೋಧಕ ಡಾ|| ಎಂ. ಚಿದಾನಂದಮೂರ್ತಿ ಈ ಕೃತಿ ಸಂಶೋಧನಾತ್ಮಕ ಕೃತಿಯಾಗಿದ್ದು, ವಿಜಯನಗರ ಸಾಮ್ರಾಜ್ಯದ ಹಲವಾರು ವಿಷಯಗಳನ್ನು ಹೊರಗಿಡುತ್ತದೆ ಎಂದರು.

ಯಾವುದೇ ಸಂಶೋಧಕ ಆಕರಗಳ ಸಾಕ್ಷಾಧಾರದಿಂದ ತಾನೇ ಪ್ರತಿಪಕ್ಷವಾಗಿ ನಿಂತು ಲೇಖಕ ಗ್ರಂಥ ರಚಿಸಿದಾಗ ಇಂತಹ ಗ್ರಂಥ ಹೊರಬರುತ್ತದೆ ಎಂದು ಹೇಳಿದರು.

ವಿಜಯನಗರ ಸಾಮ್ರಾಜ್ಯವನ್ನು ಕರ್ನಾಟಕ ಸಾಮ್ರಾಜ್ಯ ಎನ್ನುವುದು ಸೂಕ್ತ ಎಂದು ಅವರು ಅಭಿಪ್ರಾಯಿಸಿದರು. ಹಂಪಿ ಮತ್ತು ಗೋಕರ್ಣದಲ್ಲಿ ಹಿಪ್ಪಿಗಳ ಹಾವಳಿ ತಡೆಗೆ ಮುಂದಿನ ಭಾನುವಾರ ನಗರದಲ್ಲಿ ಕನ್ನಡ ಸಂಘಟನೆಗಳು ಪ್ರತಿಭಟನೆಯನ್ನು ನಡೆಸಲಿವೆ ಎಂದು ಈ ಸಂದರ್ಭದಲ್ಲಿ ತಿಳಿಸಿದರು.

ಪ್ರತಿಷ್ಠಾನದ ಅಧ್ಯಕ್ಷ ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ ಅಧ್ಯಕ್ಷತೆ ವಹಿಸಿದ್ದರು. ಡಾ|| ಆರ್. ಶೇಷಶಾಸ್ತ್ರಿ, ಮೂಲ ಲೇಖಕ ಗಡಿಯಾರಂ ರಾಮಕೃಷ್ಣಶರ್ಮ, ಅನುವಾದಕ ರಾಮಚಂದ್ರರಾವ್‌ಗುಮಾಸ್ತೆ, ಹಿರಿಯ ಸಾಹಿತಿ ಬೆಳಗೆರೆ ಕೃಷ್ಣಶಾಸ್ತ್ರಿ ಮತ್ತಿತರರು ಉಪಸ್ಥಿತರಿದ್ದರು.

(ಕೃಪೆ ಉದಯವಾಣಿ, ಏಪ್ರಿಲ್ - 7)

ಬಿ.ಎಂ.ಶ್ರೀ. ಪ್ರತಿಷ್ಠಾನದ ಸಾಹಿತ್ಯ ಕಾರ್ಯಕ್ರಮ

ಬೆಂಗಳೂರು ಮೇ. 2 - ನಗರದ ನರಸಿಂಹರಾಜ ಕಾಲೋನಿಯಲ್ಲಿರುವ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಟಿ.ಎನ್. ಮಹದೇವಯ್ಯ ಸ್ಮಾರಕ ದತ್ತಿ ಹಾಗೂ ಅನಂತರಂಗ ದತ್ತಿ ಆಶ್ರಯದಲ್ಲಿ ಈಚೆಗೆ ವಿವಿಧ ಕಾರ್ಯಕ್ರಮಗಳು ನಡೆದವು.

ದಿವಂಗತ ಟಿ.ಎನ್. ಮಹದೇವಯ್ಯ ಅವರ ವಚನಗಳನ್ನು ಕುರಿತು ಮಾತನಾಡಿದ ಪ್ರೊ|| ಟಿ.ಆರ್. ಮಹದೇವಯ್ಯ ಅವರು ಟಿ.ಎನ್.ಎಂ. ಅವರ ಆಧುನಿಕ ವಚನಗಳಲ್ಲಿ ಅನುಭಾವ, ಸಾಮಾಜಿಕ ಚಿಂತನೆ ಎರಡೂ ಸಮಾನ ಆದ್ಯತೆ ಪಡೆಯುತ್ತವೆ. ಈ ಕಾರಣದಿಂದಲೇ ಅವು ಆಧುನಿಕ ವಚನ ಸಾಹಿತ್ಯದಲ್ಲಿ ಮಹತ್ವದ ಸ್ಥಾನಕ್ಕೆ ಏರುತ್ತವೆ ಎಂದರು.

ಇದೇ ಸಂದರ್ಭದಲ್ಲಿ, ಈಚೆಗೆ ನಿಧನರಾದ ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಮಾಜಿ ಅಧ್ಯಕ್ಷ ಪ್ರೊ|| ಬಿ. ವೀರಭದ್ರಯ್ಯ ಮತ್ತು ಮೈಸೂರಿನ ಹಸ್ತಪ್ರತಿ ವಿದ್ವಾಂಸ ಕೆ.ಆರ್.ಶೇಷಗಿರಿ ಅವರಿಗೆ ಸಭೆ ಶ್ರದ್ಧಾಂಜಲಿ ಸಲ್ಲಿಸಿತು. ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ ಎನ್. ಬಸವಾರಾಧ್ಯ ಮತ್ತು ಲೇಖಕಿ ಡಾ|| ವಿಜಯಾ ಸುಬ್ಬರಾಜ್ ಅವರು ದಿವಂಗತರನ್ನು ನೆನೆದು ಮಾತನಾಡಿದರು.

**ಸಂಶೋಧನಾ ಪ್ರಶಸ್ತಿ :** ಅನಂತರಂಗ ಪ್ರತಿಷ್ಠಾನದ ವತಿಯಿಂದ ದಕ್ಷಿಣ ಕನ್ನಡ ಜಿಲ್ಲೆಯ ಸುಬ್ರಹ್ಮಣ್ಯದ ಡಾ|| ಕೆ. ಎಸ್. ಉಡುಪ ಅವರಿಗೆ 2002ನೇ ಸಾಲಿನ ಸಂಶೋಧನಾ ಸಾಹಿತ್ಯ ಪ್ರಶಸ್ತಿ ನೀಡಲಾಯಿತು. ಉಡುಪ ಅವರ 'ಶ್ರೀಕ್ಷೇತ್ರ ಕೋಟೇಶ್ವರ' ಕೃತಿಯನ್ನು ಈ ಪುರಸ್ಕಾರಕ್ಕೆ ಆಯ್ಕೆ ಮಾಡಿ, ಒಂದು ಸಾವಿರ ರೂಪಾಯಿ ನಗದು ಮತ್ತು ಪ್ರಶಸ್ತಿ ಪತ್ರ ಪ್ರದಾನ ಮಾಡಲಾಯಿತು.

ಸಂಶೋಧಕ ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಪ್ರಶಸ್ತಿ ಪ್ರದಾನ ಮಾಡಿದರು. ಲೇಖಕ ಸೂರ್ಯನಾರಾಯಣಚಡಗ ದಂಪತಿಗಳು ಪ್ರಶಸ್ತಿ ವಿಜೇತರನ್ನು ಸನ್ಮಾನಿಸಿದರು. ತೀರ್ಪುಗಾರರ ಪರವಾಗಿ ಶ್ಯಾಮಲ ರತ್ನಕುಮಾರಿ ಪುಸ್ತಕ ಪರಿಚಯ ಮಾಡಿಕೊಟ್ಟರು.

**ಪುಸ್ತಕ ಬಿಡುಗಡೆ :** ಹಸ್ತಪ್ರತಿ ಶಾಸ್ತ್ರ ತರಗತಿಯ ಹಳೆಯ ವಿದ್ಯಾರ್ಥಿ ಎ.ಆರ್. ಗುರು ಅವರ 'ಅಲಿಗೆ ಕೆಳಗಣ ಮನೆಯ ಹಸ್ತಪ್ರತಿಗಳು' ಪುಸ್ತಕವನ್ನು ವಿದ್ವಾಂಸ ಎನ್.

ಬಸವಾರಾಧ್ಯ ಬಿಡುಗಡೆ ಮಾಡಿದರು. ತಮ್ಮ ಮನೆತನದಲ್ಲಿ ಹಿಂದಿನಿಂದ ಇದ್ದ ಪ್ರಾಚೀನ ಓಲೆಗರಿ ಗ್ರಂಥ ಮತ್ತು ಕಾಗದದ ಹಸ್ತಪ್ರತಿಗಳನ್ನು ಅಧ್ಯಯನ ಮಾಡಿ ಎ.ಆರ್. ಗುರು ಅವರು ಈ ಪುಸ್ತಕ ಸಿದ್ಧಪಡಿಸಿದ್ದಾರೆ ಎಂದರು.

ಸಂಶೋಧಕ ಡಾ॥ ಕೆ.ಆರ್. ಗಣೇಶ್ ಪುಸ್ತಕದ ಉಪಯುಕ್ತತೆ ಕುರಿತು ಮಾತನಾಡಿದರು. ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಪ್ರೊ॥ ನಾ. ಗೀತಾಚಾರ್ಯ ಪ್ರಾಸ್ತಾವಿಕ ಮಾತುಗಳನ್ನಾಡಿದರು. ಹಸ್ತಪ್ರತಿ ಸೇವಾಕೇಂದ್ರವು ಪ್ರಾಚೀನ ಓಲೆಗರಿ ಮತ್ತು ಕಾಗದದ ಹಸ್ತಪ್ರತಿಗಳನ್ನು ಅಪೇಕ್ಷಿಸುವವರಿಗೆ ವೈಜ್ಞಾನಿಕ ಸಂರಕ್ಷಣೆಯ ನೆರವು ನೀಡುವುದರ ಜೊತೆಗೆ ಸಂಪ್ರತಿ ಹಾಗೂ ಸಂಪಾದನೆಯನ್ನೂ ಮಾಡಿಕೊಡಲಿದೆ ಎಂದು ತಿಳಿಸಿದರು.

ಪ್ರತಿಷ್ಠಾನದ ಅಧ್ಯಕ್ಷ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಸಭೆಯ ಅಧ್ಯಕ್ಷತೆ ವಹಿಸಿದ್ದರು.

(ಕೃಪೆ - ಪ್ರಜಾವಾಣಿ, ಶನಿವಾರ ಮೇ 3, 2003)

## "ಮಧುರ ಸ್ಮೃತಿ" ಸಂಸ್ಮರಣ ಗ್ರಂಥ ಬಿಡುಗಡೆ

ಬೆಂಗಳೂರು ಮೇ. 13 - ಪ್ರೊ॥ ಬಿ. ರಾಮಸ್ವಾಮಿ ಅವರು ಹೊರನಾಡಿನಲ್ಲಿ ಕನ್ನಡದ ಕಂಪನ್ನು ಬಿತ್ತರಿಸಿದ ಮಹಾನುಭಾವ ಎಂದುನಿವೃತ್ತ ನ್ಯಾಯಾಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಹೇಳಿದರು.

ಬಿ.ಎಂ.ಶ್ರೀ. ಪ್ರತಿಷ್ಠಾನದ ವತಿಯಿಂದ ಇತ್ತೀಚೆಗೆ ನಗರದಲ್ಲಿ ಏರ್ಪಡಿಸಿದ್ದ 'ಮಧುರಸ್ಮೃತಿ' ಸಂಸ್ಮರಣ ಗ್ರಂಥ ಬಿಡುಗಡೆ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಿದ್ದ ಅವರು, ಬಿ.ಎಂ. ಶ್ರೀಕಂಠಯ್ಯ ಅವರ ಶಿಷ್ಯ ಪರಂಪರೆಯಲ್ಲಿ ಬೆಳೆದು ಬಂದ ಶ್ರೇಷ್ಠ ವಿದ್ವಾಂಸರ ಪೈಕಿ ಬಿ. ರಾಮಸ್ವಾಮಿ ಒಬ್ಬರಾಗಿದ್ದಾರೆ ಎಂದರು.

ಡಾ॥ ಟಿ.ವಿ.ವಿ. ಅವರ ಪ್ರಧಾನ ಸಂಪಾದಕತ್ವದಲ್ಲಿ ಶ್ರೀಮತಿ ಸಾವಿತ್ರಮ್ಮರಾಮಾಸ್ವಾಮಿ ಮತ್ತು ಕನ್ನಡ ಪ್ರಾಧ್ಯಾಪಕ ಪ್ರೊ॥ ನಾ. ಗೀತಾಚಾರ್ಯರ ಸಂಪಾದಕತ್ವದಲ್ಲಿ ಸಿದ್ಧಗೊಂಡಿರುವ 500 ಪುಟಗಳ ಮಧುರ ಸ್ಮೃತಿ ಗ್ರಂಥದ ಮೊದಲ ಭಾಗದಲ್ಲಿ ಬಿ. ರಾಮಸ್ವಾಮಿ ಅವರ ಸಮಗ್ರ ಸಂಶೋಧನಾ ಲೇಖನಗಳಿವೆ. ಎರಡನೇ ಭಾಗದಲ್ಲಿ ಅಭಿಮಾನಿಗಳು ಹಾಗೂ ಬಂಧುಗಳ ನೆನಪಿನ ಲೇಖನಗಳಿದ್ದು ಅತ್ಯಂತ ಉಪಯುಕ್ತ ಗ್ರಂಥವಾಗಿದೆ ಎಂದು ಹೇಳುತ್ತ ಈ ಪುಸ್ತಕವನ್ನು ಎಂ.ವಿ.ಸೀ. ಪ್ರಶಸ್ತಿ ಪುರಸ್ಕೃತ ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯ ಬಿಡುಗಡೆ ಮಾಡಿದರು. ಇದಕ್ಕೂ ಮೊದಲು ಡಾ॥ ಜಿ.ಎಸ್. ದೀಕ್ಷಿತ್ ಅವರು ಕಳುಹಿಸಿದ್ದ ಭಾಷಣವನ್ನು ಓದಲಾಯಿತು.

ಪ್ರತಿಷ್ಠಾನದ ಅಧ್ಯಕ್ಷ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಮಾತನಾಡಿ, ರಾಮಸ್ವಾಮಿ ಅವರು ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಕನ್ನಡ ಸಾಹಿತ್ಯಾಸಕ್ತರಿಗೆ ಸಾಹಿತ್ಯ ಸಂಸ್ಕೃತಿಯ ರಸದೌತಣವನ್ನು ನೀಡಿದ ವಿದ್ಯಾದಾತರಾಗಿದ್ದರು ಎಂದು ತಿಳಿಸಿದರು.

## ಬಿ. ರಾಮಸ್ವಾಮಿ ದತ್ತಿನಿಧಿ ಸ್ಥಾಪನೆ

ಈ ಸಂದರ್ಭದಲ್ಲಿ ಬಿ. ರಾಮಸ್ವಾಮಿ ಅವರ ಶ್ರೀಮತಿಯವರಾದ ಸಾವಿತ್ರಮ್ಮನವರು ಬಿ.ರಾ. ರೊಂದಿಗಿನ ಮಧುರ ಸ್ಮೃತಿಗಳನ್ನು ಎಳೆಎಳೆಯಾಗಿ ಬಿಡಿಸಿಟ್ಟು ಪ್ರತಿಷ್ಠಾನದ ಜೊತೆಗಿನ ಅವರ ಸಂಬಂಧದ ದ್ಯೋತಕವಾಗಿ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ 'ಬಿ. ರಾಮಸ್ವಾಮಿ ಸ್ಮಾರಕ ದತ್ತಿನಿಧಿ'ಯನ್ನು ಸ್ಥಾಪಿಸಲು ಐದು ಸಾವಿರ ರೂ.ಗಳ ಪ್ರಾರಂಭಿಕ ಠೇವಣಿಯನ್ನು ನೀಡಿದರು.

## ಬಿ. ರಾಮಸ್ವಾಮಿ ಅಧ್ಯಯನ ಕೊಠಡಿ ನಿರ್ಮಾಣಕ್ಕೆ ದೇಣಿಗೆ

ಹಿರಿಯ ಮಕ್ಕಳಾದ ಶ್ರೀ ಬಿ.ಆರ್. ಬೇಟೇರಾಯ ಮತ್ತು ಶ್ರೀಮತಿ ಚಂದ್ರವತಿ ರಾಮಚಂದ್ರರವರುಗಳು ತಮ್ಮ ತಂದೆಯವರ ವ್ಯಕ್ತಿತ್ವ-ಸಾಧನೆಗಳನ್ನು ನೆನಪಿಸಿಕೊಳ್ಳುತ್ತ ಅವರನ್ನು ವಿದ್ವಾಂಸರಾಗಿ ನಾಡಿಗೆ ಪರಿಚಯಿಸಿದ ಪ್ರತಿಷ್ಠಾನ ನಿರ್ಮಿಸುತ್ತಿರುವ ಬಿ.ಎಂ.ಶ್ರೀ. ಕಲಾಭವನದಲ್ಲಿ ಬಿ. ರಾಮಸ್ವಾಮಿ ಅಧ್ಯಯನ ಕೊಠಡಿ ನಿರ್ಮಾಣಕ್ಕಾಗಿ ಒಂದುಲಕ್ಷ ರೂ. ದೇಣಿಗೆಯನ್ನು ರಾಮಸ್ವಾಮಿ ಅವರ ಮಕ್ಕಳು ಹಾಗೂ ಬಂಧುಗಳ ಪರವಾಗಿ ನೀಡುವುದಾಗಿ ತಿಳಿಸಿದರು. ಕೊಠಡಿಗೆ ಬೇಕಾಗುವ ಪೀಠೋಪಕರಣಕ್ಕಾಗಿ 10 ಸಾವಿರ ರೂ.ಗಳನ್ನು ನೀಡುವುದಾಗಿ ಬಿ.ರಾ. ರೊಂದಿಗಿನ ನೆನಪುಗಳನ್ನು ಹಂಚಿಕೊಂಡ ಬಿ.ರಾ. ಅವರ ಪ್ರಿಯ ಶಿಷ್ಯ ಹಾಗೂ ಕನ್ನಡ ಪ್ರಾಧ್ಯಾಪಕರೂ ಆದ ಪ್ರೊ॥ ಬಿ.ಆರ್. ಸುರಪುರ ಭರವಸೆ ನೀಡಿದರು.

ಬಿ.ಎಂ.ಶ್ರೀ. ಪ್ರತಿಷ್ಠಾನದ ಸಂಸ್ಥಾಪಕ ಪ್ರೊ॥ ಎಂ.ವಿ. ಸೀತಾರಾಮಯ್ಯ, ಇತಿಹಾಸ ತಜ್ಞ ಡಾ॥ ಜಿ.ಎಸ್. ದೀಕ್ಷಿತ್, ನಾಟಕಕಾರ ಬಿ.ಕೃಷ್ಣ, ಗಮಕಿ ಎಸ್. ನಾಗೇಶ್‌ರಾವ್, ಮುಂತಾದವರ ಸಹಪಾಠಿಗಳಾಗಿ ಉಸ್ಮಾನಿಯ ವಿ.ವಿ. ನಿವೃತ್ತ ಕನ್ನಡ ಪ್ರಾಧ್ಯಾಪಕರಾಗಿದ್ದ ಬಿ.ರಾ. ಅವರ ಮಧುರ ಸ್ಮೃತಿ ಹೃದಯಸ್ಪರ್ಶಿಯಾಗಿತ್ತು. ಆರಂಭದಲ್ಲಿ ಬಿ. ರಾಮಸ್ವಾಮಿ ಬಂಧುಗಳಿಂದ ಬೇಟೇರಾಯ ದೀಕ್ಷಿತರ ಹಾಡುಗಳ ಗಾಯನ ನಡೆಯಿತು. ಗಾಂಧೀ ಸಾಹಿತ್ಯಸಂಘದ ನೀಲತ್ತಹಳ್ಳಿ ಕಸ್ತೂರಿ ವಂದಿಸಿದರು. ಪ್ರೊ॥ ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿದರು. ಈ ಕಾರ್ಯಕ್ರಮದಲ್ಲಿ ಬಿ. ರಾಮಸ್ವಾಮಿಯವರ 'ಧ್ವನಿ'ಯನ್ನೂ ಬಿತ್ತರಿಸಲಾಯಿತು. ಎಸ್. ರಾಮಚಂದ್ರ, ಬಿ.ಆರ್. ನಾಗರಾಜ್ ಮತ್ತು ಜಯರಾಂ ಕಾರ್ಯಕ್ರಮ ಆತಿಥ್ಯ ವಹಿಸಿದ್ದರು.

(ಕೃಪೆ - ಪ್ರ.ವಾ., ಕ.ಪ್ರ., ವಿ.ಕ., ಸಂ.ಕ., ಉ.ವಾ., ಬ.ಕ.)

## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಳ್ಳೂರು ಶಾಖೆ ವರದಿ

1. **ಕನ್ನಡಕಣ್ವ ಬಿ.ಎಂ.ಶ್ರೀ. ರವರ ಜನ್ಮದಿನೋತ್ಸವ ಆಚರಣೆ** : ದಿನಾಂಕ ೧-೧-೨೦೦೩ ರಂದು ನಡೆದ ಮೇಲ್ಕಂಡ ಸಮಾರಂಭದ ಉದ್ಘಾಟನೆಯನ್ನು ಬೆಳ್ಳೂರು ಕೆನರಾ ಬ್ಯಾಂಕಿನ ವ್ಯವಸ್ಥಾಪಕರಾದ ಶ್ರೀ ಕೆ.ಬಿ. ರಾಮಚಂದ್ರರವರು ನೇರವೇರಿಸಿದರು. ಬಿ.ಎಂ.ಶ್ರೀ. ಸ್ಮಾರಕಭವನ ಬೆಳ್ಳೂರಿನ ಅಧ್ಯಕ್ಷರಾದ ಶ್ರೀ ಎಸ್. ಕೃಷ್ಣಮೂರ್ತಿಯವರು ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಮಹಮದ್‌ಕಲೀಂಉಲ್ಲಾರವರು ಆಗಮಿಸಿದ್ದರು. ಅಂದು ಸಂಜೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮಂಡ್ಯ ವತಿಯಿಂದ 'ಪುತ್ಥಲಿ ಬೊಂಬೆ', ಸೂತ್ರದ ಬೊಂಬೆ ಆಟ ಏರ್ಪಡಿಸಲಾಗಿತ್ತು.

ದಿನಾಂಕ ೩-೧-೨೦೦೩ ರಂದು ನಡೆದ ಸಮಾರೋಪ ಸಮಾರಂಭವು ಶ್ರೀ ಆದಿಚುಂಚನಗಿರಿ ಮಹಾಕ್ಷೇತ್ರದ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲ ಗಂಗಾಧರನಾಥ ಸ್ವಾಮೀಜಿಯವರ ಸಾನಿಧ್ಯದಲ್ಲಿ ನಡೆಯಿತು. ಮುಖ್ಯ ಅತಿಥಿಗಳಾಗಿ ಶ್ರೀ ಕೆ.ಹೆಚ್. ಅಶ್ವತ್ಥನಾರಾಯಣ ಗೌಡರು, ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀಗಳು, ಶ್ರೀ ಎ.ಎಸ್. ನಾಗರಾಜ್, ಬೆಂಗಳೂರು ಕೇಂದ್ರದ ಗೌರವ ಕಾರ್ಯದರ್ಶಿಗಳಾದ ಪ್ರೊ॥ ನಾ. ಗೀತಾಚಾರ್ಯ ಆಗಮಿಸಿದ್ದರು.

2. **ಆಚಾರ್ಯ ಬಿ.ಎಂ.ಶ್ರೀ.ರವರ ಪ್ರತಿಮೆ ಅನಾವರಣ ಮಹೋತ್ಸವ** : ದಿನಾಂಕ 1-9-03 ರಂದು ಬೆಳ್ಳೂರು ಬಸ್ ನಿಲ್ದಾಣದಲ್ಲಿ ನಡೆದ ಈ ಸಮಾರಂಭದಲ್ಲಿ ಕನ್ನಡ ಮತ್ತು

ಸಂಸ್ಕೃತಿ ಇಲಾಖಾ ಸಚಿವರಾದ ಶ್ರೀಮತಿ ರಾಣಿ ಸತೀಶ್‌ರವರು ಪ್ರತಿಮೆಯ ಅನಾವರಣ ನೆರವೇರಿಸಿದರು. ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಯವರು ಸಾನಿಧ್ಯ ವಹಿಸಿದ್ದರು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವ ಶ್ರೀ ಬಿ.ಕೆ. ಚಂದ್ರಶೇಖರ್ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಮಂಡ್ಯ ಜಿಲ್ಲಾ ಪಂಚಾಯಿತಿ ಅಧ್ಯಕ್ಷ ಶ್ರೀ ಗುರುಚರಣ್, ಶಾಸಕ ಶ್ರೀ ಎನ್. ಚಲುವರಾಯ ಸ್ವಾಮಿ, ಸಾಹಿತಿ ಪ್ರೊ|| ಎಲ್.ಎಸ್ ಶೇಷಗಿರಿರಾವ್, ಸ್ವಾತಂತ್ರ ಹೋರಾಟಗಾರ ಶ್ರೀ ಹೆಚ್.ಎಸ್. ದೊರೆಸ್ವಾಮಿ, ನಾಗಮಂಗಲ ಕ.ಸಾ.ಪ. ಅಧ್ಯಕ್ಷ ಶ್ರೀ ಮಹಮ್ಮದ್ ಕಲೀಂಉಲ್ಲಾ , ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ ಮುಂತಾದವರು ಆಗಮಿಸಿದ್ದರು.

**3. ಬಿ.ಎಂ.ಶ್ರೀ. ಸ್ಮಾರಕ ಭವನ ಪ್ರತಿಷ್ಠಾನ, ಬೆಳ್ಳೂರು ಮತ್ತು ಪತಂಜಲಿ ಯೋಗ ಶಿಕ್ಷಣ ಸಮಿತಿ ಬಿ.ಜಿ. ನಗರ ಶಾಖೆ ಇವರ ಸಂಯುಕ್ತ ಆಶ್ರಯದಲ್ಲಿ** ದಸರಾ ಪ್ರಯುಕ್ತ ಬೊಂಬೆ ಜೋಡಿಸುವ ಸ್ಪರ್ಧೆ, ಗಾಂಧೀ ಜಯಂತಿ ಹಾಗೂ ವಿದ್ಯಾರ್ಥಿಗಳ ಪ್ರತಿಭಾ ಪುರಸ್ಕಾರ ಕಾರ್ಯಕ್ರಮಗಳು. ದಿನಾಂಕ 2-10-03 ರಂದು ಬೆಳ್ಳೂರಿನಲ್ಲಿ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಸಾನಿಧ್ಯದಲ್ಲಿ ನಡೆದವು. ಅಧ್ಯಕ್ಷತೆಯನ್ನು ಶ್ರೀ ಡಿ.ಬಿ. ವೃಷಭರಾಜ್ (ಮಾಜಿ ಪುರಸಭಾಧ್ಯಕ್ಷರು, ಬೆಳ್ಳೂರು) ವಹಿಸಿದ್ದರು. ಶ್ರೀ ಕೆ.ಎನ್. ಕೃಷ್ಣಮೂರ್ತಿ, ಶ್ರೀ ಬಿ.ಎಸ್. ಚಕ್ರವರ್ತಿ, ಪ್ರೊ|| ನಾ. ಗೀತಾಚಾರ್ಯ, ಶ್ರೀ ರಮೇಶ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು

**4. ಸ್ಥಾನಿಕ ಸಮಿತಿ ಸಭೆ :** ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಬೆಳ್ಳೂರಿನಲ್ಲಿರುವ ಆಚಾರ್ಯ ಬಿ.ಎಂ.ಶ್ರೀ ಶತಮಾನೋತ್ಸವ ಭವನದ ಸ್ಥಾನಿಕ ಸಮಿತಿ ಸಭೆ ದಿನಾಂಕ 11-11-03 ರಂದು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಸನ್ನಿಧಿಯಲ್ಲಿ ಶ್ರೀ ಕ್ಷೇತ್ರ ಆದಿಚುಂಚನಗಿರಿಯಲ್ಲಿ ನಡೆಯಿತು. ಈ ಸಭೆಯಲ್ಲಿ ಬೆಂಗಳೂರಿನ ಡಾ|| ಹೋ. ಶ್ರೀನಿವಾಸಯ್ಯ, ಪ್ರೊ|| ನಾ. ಗೀತಾಚಾರ್ಯ, ಪ್ರೊ|| ಡಿ. ಲಿಂಗಯ್ಯ, ಶ್ರೀ ಎಸ್.ವಿ. ಶ್ರೀನಿವಾಸರಾವ್ ಮತ್ತು ಶ್ರೀ ಎನ್.ಎಸ್. ಕೃಷ್ಣಸ್ವಾಮಿರವರು ಭಾಗವಹಿಸಿದ್ದರು. ಅಲ್ಲಿನ ಕಾರ್ಯಕ್ರಮಗಳು ಸುಸೂತ್ರವಾಗಿ ನಡೆದು ಹೋಗಲು ಅನುಕೂಲವಾಗುವಂತೆ ಸ್ಥಾನಿಕ ಸಮಿತಿ ಮತ್ತು ಕಾರ್ಯಕಾರಿ ಸಮಿತಿಯನ್ನು ಪುನರ್ರಚಿಸಲಾಯಿತು.

**5. ಸಂಶೋಧನೆಯಲ್ಲಿ ಮಾದರಿ ಸೃಷ್ಟಿಸಿದ ತೀ.ನಂ.ಶ್ರೀ.** ಬೆಂಗಳೂರು ನ. 28 - ಸಾಹಿತ್ಯ ಸಂಶೋಧನೆಯಲ್ಲಿ ಪ್ರೊ|| ತೀ.ನಂ. ಶ್ರೀಕಂಠಯ್ಯ ಅವರು ಮಾದರಿ ಸೃಷ್ಟಿಸಿದರು ಎಂದು ಖ್ಯಾತ ವಿದ್ವಾಂಸ ಡಾ|| ಎಂ. ಚಿದಾನಂದಮೂರ್ತಿ ಈಚೆಗೆ ಇಲ್ಲಿ ತಿಳಿಸಿದರು. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ರಜತ ಮಹೋತ್ಸವದ ಅಂಗವಾಗಿ ತೀ.ನಂ.ಶ್ರೀ. ಸ್ಮಾರಕ ಪ್ರಥಮ ದತ್ತಿ ಉಪನ್ಯಾಸ ಮಾಡಿದ ಅವರು, ಶ್ರೀಕಂಠಯ್ಯನವರು ಭಾರತ ಕಂಡ ಶ್ರೇಷ್ಠ ಭಾಷಾ ವಿಜ್ಞಾನಿ ಮತ್ತು ಸಾಂಸ್ಕೃತಿಕ ಸಂಶೋಧಕ ಎಂದು ಬಣ್ಣಿಸಿದರು. ತೀ.ನಂ.ಶ್ರೀ. ಅವರು ಶ್ರೇಷ್ಠ ವಿದ್ವಾಂಸರ ಪಡೆಯನ್ನೇ ಸೃಷ್ಟಿಸಿದರು. ಅವರ ಹೆಸರಿನಲ್ಲಿ ದತ್ತಿ ನಿಧಿ ಸ್ಥಾಪಿಸಿದ್ದು ಇದುವರೆಗೆ 11,000 ರೂಪಾಯಿ ಸಂಗ್ರಹವಾಗಿದೆ. ಇದನ್ನು 50,000 ರೂಪಾಯಿಗೆ ಏರಿಸುವ ಉದ್ದೇಶವಿದೆ ಎಂದು ಚಿ.ಮೂ ತಿಳಿಸಿದರು. ಪ್ರತಿಷ್ಠಾನದ ಅಧ್ಯಕ್ಷರು ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀಗಳು ಅಧ್ಯಕ್ಷತೆ ವಹಿಸಿದ್ದರು. ಪ್ರೊ. ಡಿ. ಲಿಂಗಯ್ಯ ಸ್ವಾಗತಿಸಿದರು. ಪ್ರೊ|| ಗೀತಾಚಾರ್ಯ ವಂದಿಸಿದರು.

ಪ್ರೊ|| ಎಲ್.ಎಸ್. ಶೇಷಗಿರಿರಾವ್, ಪ್ರೊ|| ಎಚ್.ಎಂ. ಮರುಳಸಿದ್ಧಯ್ಯ , ಎಸ್.ವಿ. ಶ್ರೀನಿವಾಸರಾವ್ ಮುಂತಾದವರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

ಕೃಪೆ : ಪ್ರಜಾವಾಣಿ

# ೩. ದಾನಗಳು

## 1. ಪ್ರತಿಷ್ಠಾನಕ್ಕೆ ದಾನ

| | | |
|---|---|---|
| 1. | ಶ್ರೀಮತಿ ಶ್ಯಾಮಲಾ ರತ್ನಕುಮಾರಿ, ಬೆಂಗಳೂರು | 3,000-00 |
| 2. | ಪ್ರೊ|| ನಾ. ಗೀತಾಚಾರ್ಯ, ಬೆಂಗಳೂರು | 700-00 |
| 3. | ಡಾ|| ಕೆ.ಎಸ್. ಗಣೇಶ್, ಬೆಂಗಳೂರು | 3,000-00 |
| 4. | ಡಾ|| ದೇವರ ಕೊಂಡಾರೆಡ್ಡಿ, ಹಂಪಿ | 100-00 |
| 5. | ಶ್ರೀ ಎನ್. ರಾಮಚಂದ್ರಶಾಸ್ತ್ರಿ, ಬೆಂಗಳೂರು | 2,000-00 |
| 6. | ನಾ. ಮಲ್ಲಿಕಾರ್ಜುನ, ಬೆಂಗಳೂರು | 2,000-00 |
| 7. | ಬಿ.ಇ.ಎಂ.ಎಲ್. ಕಾರ್ಮಿಕರ ಸಂಘ | 300-00 |
| 8. | ಪ್ರೊ|| ಎನ್. ಬಸವಾರಾಧ್ಯ | 250-00 |

## 2. ಗ್ರಂಥ ಪ್ರಕಟಣೆಗೆ ದಾನ

### ಅ. ಮಧುರಸ್ಮೃತಿ ಗ್ರಂಥಕ್ಕೆ

| | | |
|---|---|---|
| 1. | ಶ್ರೀಮತಿ ಸಾವಿತ್ರಮ್ಮ ರಾಮಸ್ವಾಮಿ ಮತ್ತು ಕುಟುಂಬವರ್ಗ | 60,000-00 |

### ಆ. ಅಲಿಗೆ ಕೆಳಗಣ ಮನೆಯ ಹಸ್ತಪ್ರತಿಗಳು ಪುಸ್ತಕ ಪ್ರಕಟಣೆಗೆ

| | | |
|---|---|---|
| 2. | ಶ್ರೀ ಎ.ಆರ್. ಗುರು, ಬೆಂಗಳೂರು | 8,500-00 |

## 3. ಕಟ್ಟಡ ನಿಧಿಗೆ ದಾನ

| | | |
|---|---|---|
| 1. | ಶ್ರೀಮತಿ ಸಾವಿತ್ರಮ್ಮ ರಾಮಸ್ವಾಮಿ ಮತ್ತು ಕುಟುಂಬವರ್ಗ | 1,05,000-00 |
| 2. | ಶ್ರೀ ಜಿ. ವಿಠಲರಾವ್, ಬೆಂಗಳೂರು | 1,000-00 |
| 3. | ಶ್ರೀ ಮೋಹನದಾಸ್ ಧಾವಸಕರ | 2,000-00 |
| 4. | ಶ್ರೀ ಎಸ್.ಟಿ. ರಾಧಾಕೃಷ್ಣ, ಬೆಂಗಳೂರು (ಎಂ.ವಿ.ಸೀ. ಸಭಾಂಗಣದಲ್ಲಿ ಎಂ.ವಿ.ಸಿ ಪ್ರತಿಮೆ ನಿರ್ಮಾಣಕ್ಕಾಗಿ) ಇವರು ಈಚೆಗೆ ವಿಶೇಷ ದಾನಿ ಸದಸ್ಯರಾಗಿದ್ದು ಆ ಮೊತ್ತ 10,000-00 ರೂ.ಗಳನ್ನು ನೀಡಿದ್ದಾರೆ. | 10,000-00 |
| 5. | ಶ್ರೀಮತಿ ವಿದ್ಯಾವಿಕ್ರಂ, ಬೆಂಗಳೂರು | 1,001-00 |
| 6. | ಶ್ರೀ ಎಸ್.ಎಸ್. ಶ್ರೀಕಂಠೇಶ್ವರ, ಬೆಂಗಳೂರು | 1,500-00 |
| 7. | ಶ್ರೀ ಎಚ್.ಕೆ. ಸೀತಾರಾಮ್, ಬೆಂಗಳೂರು | 1,000-00 |
| 8. | ಪ್ರೊ|| ಬಿ.ಸಿ. ರಾಮಚಂದ್ರಶರ್ಮ, ಬೆಂಗಳೂರು | 2,500-00 |
| 9. | ಶ್ರೀ ಎಚ್.ಎಸ್.ಎಲ್. ಮೂರ್ತಿ, ಬೆಂಗಳೂರು | 1,001-00 |
| 10. | ಶ್ರೀ ಎಸ್.ಎಸ್. ಕೃಷ್ಣಸ್ವಾಮಿ, ಬೆಂಗಳೂರು | 500-00 |
| 11. | ಶ್ರೀ ಎಸ್ ಸಚ್ಚಿದಾನಂದ, ಬೆಂಗಳೂರು | 1,000-00 |
| 12. | ಶ್ರೀಮತಿ ಉಷಾ ಆನಂದ, ಬೆಂಗಳೂರು | 1,001-00 |

| | | |
|---|---|---|
| 13. | ಶ್ರೀ ಎಸ್. ಜಿ. ವಾಸುದೇವರಾವ್, ಬೆಂಗಳೂರು | 1,000-00 |
| 14. | ಶ್ರೀಮತಿ ಲಲಿತಮ್ಮ ಬೆಂಗಳೂರು | 1,000-00 |
| 15. | ಶ್ರೀಮತಿ ಪಿ.ಜಿ. ಮಂಗಳ, ಬೆಂಗಳೂರು | 500-00 |
| 16. | ಶ್ರೀಮತಿ ರತ್ನ ಎನ್. ರಾವ್, ಪೂನ (ಬಿ.ಎಂ.ಶ್ರೀ. ಮೊಮ್ಮಗಳು) | 1,00,000-00 |

## 4. ದತ್ತಿನಿಧಿ ದಾನಗಳು

| | | |
|---|---|---|
| **1.** | **ಪ್ರೊ।। ಬಿ. ರಾಮಸ್ವಾಮಿ ಸ್ಮಾರಕ ದತ್ತಿನಿಧಿಗಾಗಿ** | |
| | ಶ್ರೀಮತಿ ಸಾವಿತ್ರಮ್ಮ ರಾಮಸ್ವಾಮಿ, ಬೆಂಗಳೂರು | 5,000-00 |
| | (ಮಧುರಸ್ಮೃತಿ ಗ್ರಂಥದ ಮಾರಾಟದ ಹಣ ಇದಕ್ಕೆ ಸೇರುತ್ತದೆ) | |
| **2.** | **ಎಂ.ಎ. ಜಯಚಂದ್ರ ದತ್ತಿನಿಧಿಗಾಗಿ** | |
| | ಪ್ರೊ।। ಎಂ.ಎ. ಜಯಚಂದ್ರ, ಬೆಂಗಳೂರು | 10,000-00 |
| | (ಈವರೆಗೆ ಒಟ್ಟು 15 ಸಾವಿರ ರೂ.ಗಳ ಸಂಗ್ರಹವಾಗಿದೆ) | |
| **3.** | **ಸೋಸಲೆ ದತ್ತಿನಿಧಿಗಾಗಿ** | |
| | ಶ್ರೀಮತಿ ರಾಮರಾವ್ | 500-00 |
| 4. | ಶ್ರೀಮತಿ ಶಶಿಮೋಹನ್ | 100-00 |
| 5. | ಶ್ರೀಮತಿ ವಿಜಯ ಸಚ್ಚಿದಾನಂದ | 501-00 |
| | (ಈವರೆಗೆ ಒಟ್ಟು 53,250 ರೂ. ಸಂಗ್ರಹವಾಗಿದೆ) | |
| **6.** | **ಶಂಬಾ ದತ್ತಿನಿಧಿಗಾಗಿ** | |
| | ಶ್ರೀ ವಿ.ಎಸ್. ಜೋಶಿ, ಅಮೆರಿಕಾ | 10,000-00 |
| **7.** | **ತೀ.ನಂ.ಶ್ರೀ. ದತ್ತಿನಿಧಿಗಾಗಿ** | |
| | ಪ್ರೊ।। ತೀ.ಶ್ರೀ. ನಾಗಭೂಷಣ, ಬೆಂಗಳೂರು | 5,000-00 |

## 5. ಗ್ರಂಥದಾನ

| | | |
|---|---|---|
| 1. | ಶ್ರೀ ಜಯಪ್ರಕಾಶ್, ಬೆಂಗಳೂರು | 99 ಪುಸ್ತಕಗಳು |
| 2. | ಶ್ರೀ ಕೆ.ಆರ್. ನರಸಿಂಹಮೂರ್ತಿ, ಬೆಂಗಳೂರು | 101 ಪುಸ್ತಕಗಳು |
| 3. | ಡಾ।। ದೇವರಕೊಂಡಾರೆಡ್ಡಿ ಅವರ ಶಾಸನ ಸಂಪುಟ | 7 ಪುಸ್ತಕಗಳು |
| 4. | ಡಾ।। ಎಚ್.ಎನ್. ಮುರಳೀಧರ | 312 ಪುಸ್ತಕಗಳು |
| 5. | ಅರುಣ ಜಿ. ದೇಸಾಯಿ | 12 ಪುಸ್ತಕಗಳು |
| 6. | ಶ್ರೀ ಎ. ಆರ್. ಗುರು ಅವರ ಮೂಲಕ ಶ್ರೀ ಜಿ. ವೆಂಕಟೇಶ್ ಅವರು | 163 ಪುಸ್ತಕಗಳು |
| 7. | ಶ್ರೀ ಕೈವಾರ ಗೋಪಿನಾಥ | 84 ಪುಸ್ತಕಗಳು |
| 8. | ಶ್ರೀ ಟಿ.ಎಸ್. ವಿದ್ಯಾಶಂಕರ್ | 9 ಪುಸ್ತಕಗಳು |

## 6. ಹಸ್ತಪ್ರತಿ ದಾನ

1. ಶ್ರೀ ವೈ.ಕೆ. ಮೋಹನ್, ಪುಸ್ತಕ ಶಕ್ತಿ, ಬೆಂಗಳೂರು, ಒಂದು ಓಲೆಗರಿ ಹಸ್ತಪ್ರತಿ.
2. ಕೆಂಪುನಾರಾಯಣ ಕವಿಯ ವಂಶಸ್ಥರಾದ ಶ್ರೀಮತಿ ಲಲಿತಾ ನಾಡಿಗ್, ಬೆಂಗಳೂರು, ಮುದ್ರಾಮಂಜೂಷದ ಓಲೆಗರಿ ಗ್ರಂಥ ಸ್ವಹಸ್ತಾಕ್ಷರ ಹಸ್ತಪ್ರತಿ ( ಈ ಎರಡೂ ಹಸ್ತಪ್ರತಿಗಳು, ಅಧ್ಯಕ್ಷರಾದ ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ ಅವರ ಮೂಲಕ ಬಂದಿವೆ)
3. ಶ್ರೀಮತಿ ಜಾನಕಿ ಕೃಷ್ಣಮೂರ್ತಿ, ಬೆಂಗಳೂರು, ಒಂದು ಓಲೆಗರಿ ಹಸ್ತಪ್ರತಿ (ಡಾ|| ನೀ.ಕೃ. ರಾಮಶೇಷನ್ ಅವರ ಮೂಲಕ)

1. ಶ್ರೀ ಎ. ಶ್ರೀಪಾದಭಟ್ಟ ಅವರು ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ ಅವರ ಮೂಲಕ ಎರಡು ಪ್ರಾಚೀನ ಓಲೆಗರಿ ಹಸ್ತಪ್ರತಿಗಳನ್ನು ದಾನವಾಗಿ ನೀಡಿದ್ದಾರೆ.
2. ಶ್ರೀ ನರಸಿಂಹ ಜಿ. ದೀಕ್ಷಿತ್ (ಬನವಾಸಿ) ಅವರು ಪ್ರತಿಷ್ಠಾನಕ್ಕೆ ಎರಡು ಹಸ್ತಪ್ರತಿಗಳನ್ನು ದಾನವಾಗಿ ನೀಡಿದ್ದಾರೆ.

## 7. ವಿಶೇಷ ದಾನಿ ಸದಸ್ಯತ್ವ

1. ಶ್ರೀ ಮೋಹನದಾಸ ದಾವಸ್ಕರ ಅವರು 10,000 ನೀಡಿ ವಿಶೇಷ ದಾನಿ ಸದಸ್ಯರಾಗಿದ್ದಾರೆ.

ಈ ಎಲ್ಲ ದಾನಿಗಳಿಗೆ ಪ್ರತಿಷ್ಠಾನ ಕೃತಜ್ಞತಾಪೂರ್ವಕ ವಂದನೆಗಳನ್ನರ್ಪಿಸುತ್ತ, ದಾನದ ಉದ್ದೇಶಕ್ಕೆ ಕುಂದುಂಟಾಗದಂತೆ ದಾನಗಳನ್ನು ಸದುಪಯೋಗ ಪಡಿಸಲಾಗುವುದು ಎಂದು ಈ ಮೂಲಕ ಭರವಸೆ ನೀಡುತ್ತೇವೆ.

## ಪ್ರತಿಕ್ರಿಯೆ

1. ಕರ್ನಾಟಕಲೋಚನ ಡಿಸೆಂಬರ್ 2002ರ ಸಂಚಿಕೆಯಲ್ಲಿ ವಾರಣಾಸಿಯಲ್ಲಿ ಅನಾವರಣಗೊಂಡಿರುವ ಭಾವಚಿತ್ರ ಎಂ.ವಿ. ಸೀತಾರಾಮಯ್ಯನವರದು ಎಂದು ಪತ್ರಿಕಾ ವರದಿಯನ್ನಾಧರಿಸಿ ವಸ್ತು ಸಂಗ್ರಹಾಲಯದಲ್ಲಿ ಟಿಪ್ಪಣಿ ಹಾಕಿದೆ. ಆದರೆ ಅದು ವಿ. ಸೀತಾರಾಮಯ್ಯನವರದು ಎಂದು ಅವರ ಮಕ್ಕಳಾದ ಶ್ರೀ ವಿ. ಎಸ್. ಕೃಷ್ಣಮೂರ್ತಿ ಅವರು 14-6-03ರ ಪತ್ರದಲ್ಲಿ ತಿಳಿಸಿದ್ದಾರೆ.

2. ಅದೇ ಸಂಚಿಕೆಯಲ್ಲಿ ಬಂದಿರುವ ಶಿವರಾಮ ಕಾರಂತರ ಲೇಖನಗಳ 'ಕಾರಂತ ಕಿರಣ' ಕಾರ್ಯಕ್ರಮವಾಗಿದ್ದು ಅದನ್ನು ನಡೆಸಿದ ಕ್ರೈಸ್ತ ಕಾಲೇಜಿನ ಹೆಸರನ್ನು ಸೇರಿಸಿಲ್ಲ ಎಂದು ಪ್ರೊ|| ಚಿ. ಶ್ರೀನಿವಾಸರಾಜು ಅವರು 30-6-03ರ ಪತ್ರದಲ್ಲಿ ತಿಳಿಸಿದ್ದಾರೆ.

ವಾಸ್ತವವಾಗಿ ಕಾರಂತರು ನಿಧನರಾದ ವರ್ಷ ಕ್ರೈಸ್ತ ಕಾಲೇಜು ಕನ್ನಡ ಸಂಘ, ಶಂಬಾ ವಿಚಾರ ವೇದಿಕೆ ಮತ್ತು ಬಿ.ಎಂ.ಶ್ರೀ. ಪ್ರತಿಷ್ಠಾನಗಳು ಸೇರಿ ಈ ಕಾರ್ಯಕ್ರಮ ನಡೆಸಲಾಗಿತ್ತು. ಈ ಲೇಖನಗಳನ್ನು ಈ ಎಲ್ಲ ವಿವರಗಳೊಂದಿಗೆ ಪ್ರತ್ಯೇಕ ಪುಸ್ತಕರೂಪದಲ್ಲಿ ಪ್ರಕಟಿಸಲಾಗುತ್ತಿದೆ.

ಪತ್ರಿಕೆಯ ಮಾಹಿತಿಗಳ ಖಚಿತತೆಗಾಗಿ ಪತ್ರ ಮೂಲಕ ಸಹಕರಿಸಿರುವ ಮಾನ್ಯರಿಗೆ ಲೋಚನ ಆಭಾರಿಯಾಗಿರುತ್ತದೆ.

- ಸಂಪಾದಕರು

# ವಸ್ತು ಸಂಗ್ರಹ

**೧. ಪುರಾತನ ಹಸ್ತಪ್ರತಿ ಸಂರಕ್ಷಣೆಗೆ ರಾಷ್ಟ್ರೀಯ ಯೋಜನೆ :**

ಪ್ರಾಚೀನ ಹಸ್ತಪ್ರತಿಗಳ ಸಂರಕ್ಷಣೆಗೆ ರಾಷ್ಟ್ರಮಟ್ಟದ ೩೬ ಕೋಟಿ ರೂಪಾಯಿಗಳ ನೂತನ ಯೋಜನೆಗೆ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಶುಕ್ರವಾರ ಚಾಲನೆ ನೀಡಿದ ಸಂತಸದ ಸುದ್ದಿಯೊಂದು ಪತ್ರಿಕೆಯಲ್ಲಿ ಬಂದಿದೆ.

"ಈ ಯೋಜನೆಯಿಂದ ಭಾರತದ ಏಕತೆಗೆ ವಿನೂತನ ಪುರಾವೆ ದೊರೆತು ರಾಷ್ಟ್ರ ನಿರ್ಮಾಣಕ್ಕೆ ಸಹಕಾರಿಯಾಗುತ್ತದೆ. ಜತೆಗೆ ಹಲವಾರು ಹರಪ್ಪಾ, ಮೊಹೆಂಜೋದಾರೋಗಳು ಬೆಳಕಿಗೆ ಬರುತ್ತವೆ. ಇದರಿಂದ ನಮ್ಮ ಆಧ್ಯಾತ್ಮಿಕ, ಸಾಂಸ್ಕೃತಿಕ, ಬೌದ್ಧಿಕ ಮತ್ತು ವೈಜ್ಞಾನಿಕ ಪರಂಪರೆ ವೃದ್ಧಿಸುತ್ತದೆ. ಈವರೆಗಿನ ಎಲ್ಲಾ ಯೋಜನೆಗಳಿಗಿಂತ ಇದು ಭಿನ್ನ ಎಂದ ವಾಜಪೇಯಿ, ಇದರಿಂದ ಜನತೆಗೆ ಯಾವುದೇ ನೇರ ಲಾಭ ಇಲ್ಲ. ಆದರೆ ಭಾರತೀಯ ನಾಗರೀಕತೆಯ ಭವ್ಯತೆ ಮತ್ತು ವೈವಿಧ್ಯತೆ ಬಗ್ಗೆ ಹೆಮ್ಮೆಯಿಂದ ಹೇಳುವಂತಾಗುತ್ತದೆ. ಪ್ರಾಚೀನ ಕಾಲದಲ್ಲಿ ಕೃಷಿ, ನೀರಾವರಿ, ಖಗೋಳಶಾಸ್ತ್ರ, ಗಣಿತ, ವಿಜ್ಞಾನ ಮತ್ತು ತಂತ್ರಜ್ಞಾನದಂಥ ಹಲವು ಕ್ಷೇತ್ರಗಳಲ್ಲಿ ಭಾರತ ಎಷ್ಟು ಮುಂದುವರಿದಿತ್ತು ಎಂಬ ಬಗ್ಗೆ ಈ ಹಸ್ತಪ್ರತಿಗಳಿಂದ ಹೆಚ್ಚಿನ ಮಾಹಿತಿ ದೊರೆಯುತ್ತದೆ ಎಂದು ಪ್ರಧಾನಿ ವಿವರಿಸಿದರು.

"ಇದರಿಂದ ಭಾರತೀಯ ಭಾಷೆಗಳ ಅಧ್ಯಯನ ಮತ್ತು ಸಂಶೋಧನೆಗೆ ಹೆಚ್ಚಿನ ಅನುಕೂಲವಾಗುತ್ತದೆ. ಇಂದಿರಾಗಾಂಧಿ ರಾಷ್ಟ್ರೀಯ ಕಲಾ ಕೇಂದ್ರದಲ್ಲಿ ಹಸ್ತಪ್ರತಿಗಳ ಸಂಗ್ರಹಾಲಯ ರಚಿಸಲಾಗುವುದು; ಸುಮಾರು ೩೫ ಲಕ್ಷಕ್ಕೂ ಹೆಚ್ಚಿನ ಹಸ್ತಪ್ರತಿಗಳು ಸಂಸ್ಕೃತದಲ್ಲಿರುವುದರಿಂದ ಸಂಸ್ಕೃತ ವಿದ್ವಾಂಸರನ್ನೇ ಈ ಕಾರ್ಯಕ್ಕೆ ನಿಯೋಜಿಸಲಾಗುತ್ತದೆ. ಸರಕಾರದ ಉಳಿದ ಯೋಜನೆಗಳಂತೆ ಇದು ನಡೆಯುವುದಿಲ್ಲ ಎಂದು ಭರವಸೆ ನೀಡಿದ ಅವರು, ಹಸ್ತಪ್ರತಿಗಳನ್ನು ಆಧುನಿಕ ದೃಷ್ಟಿಯಿಂದ ಸಮಗ್ರವಾಗಿ ಅಧ್ಯಯನ ಮಾಡಲು ಸರಕಾರೇತರ ಸಂಸ್ಥೆಗಳು ಕೈ ಜೋಡಿಸಬೇಕೆಂದು ಕರೆ ನೀಡಿದರು.

ಇದೊಂದು ಅತ್ಯುಪಯುಕ್ತ ಕಾರ್ಯವಾಗಿದ್ದು, ಹಸ್ತಪ್ರತಿವಿದ್ವಾಂಸರ ಬಹುದಿನಗಳ ಕನಸಾಗಿದೆ. ೧೯೮೨ರಲ್ಲೇ ಪ್ರತಿಷ್ಠಾನ ನಡೆಸಿದ ರಾಷ್ಟ್ರೀಯ ವಿಚಾರಗೋಷ್ಠಿಯಲ್ಲಿ ಈ ಸಂಬಂಧದ ನಿರ್ಣಯವಾಗಿತ್ತು. ಇದರಿಂದ ಪ್ರಾಚ್ಯವಸ್ತು, ಪತ್ರ ದಾಖಲೆಗಳಿಗಿರುವಂತೆ ಈವರೆಗೆ ನಿರ್ಲಕ್ಷ್ಯಕ್ಕೊಳಗಾಗಿದ್ದ ಹಸ್ತಪ್ರತಿಗಳಿಗೂ ಒಂದು ಸರ್ಕಾರಿ ಇಲಾಖೆ ಆದಂತಾಯಿತು. ಆದಷ್ಟು ಶೀಘ್ರವಾಗಿ ರಾಜ್ಯ ಸರ್ಕಾರ ಇತ್ತ ಗಮನ ಹರಿಸಿ ಹಸ್ತಪ್ರತಿಗಳ ರಾಜ್ಯ ಸಂಸ್ಥೆಗಳನ್ನು ರೂಪಿಸಬೇಕು. ಇತ್ತೀಚೆಗೆ ಚೆನ್ನೈನಲ್ಲಿ ಹಸ್ತಪ್ರತಿಗಳ ರಾಷ್ಟ್ರೀಯ ಮಿಷನ್ ಆಯೋಜಿಸಿದ್ದ ಹಸ್ತಪ್ರತಿ ಕಾರ್ಯಾಗಾರದಲ್ಲಿ ಪ್ರತಿಷ್ಠಾನದ ಹಸ್ತಪ್ರತಿ ವೇದಿಕೆ 'ಸಿರಿಕಂಟ'ದ ಸದಸ್ಯರಾದ ಜೆ.ಎಸ್.ಎಸ್. ರಾವ್ ಹಾಗೂ ಮನೋಜ್ ಭಾಗವಹಿಸಿದ್ದರು.

(ವ್ಯ.ಸಂ.)

**೨. ಏಕರೂಪದ ಪುಸ್ತಕ ಮಾರಾಟ ಜಾಲ :**

ವಿ.ವಿ. ಮತ್ತು ವಿವಿಧ ಸಂಘ ಸಂಸ್ಥೆಗಳು ಸೇರಿ ಇಡೀ ರಾಜ್ಯದಾದ್ಯಂತ ಏಕರೂಪದ ಪುಸ್ತಕ ಮಾರಾಟ ಜಾಲವನ್ನು ಹೊಂದುವ ಪ್ರಸ್ತಾವನೆಯೊಂದನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸಲಾಗಿದೆ ಎಂದು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷ ಮಲ್ಲೇಪುರಂ ಜಿ. ವೆಂಕಟೇಶ್ ಈಚಿಗೆ ಒಂದು ಸಮಾರಂಭದಲ್ಲಿ ಹೇಳಿದ್ದಾರೆ.

ಕನ್ನಡದಲ್ಲಿ ಸಾಕಷ್ಟು ಪುಸ್ತಕಗಳು ಪ್ರಕಟವಾಗುತ್ತಿವೆ. ಆದರೆ ಇವುಗಳ ಮಾರಾಟ ಸರಿಯಾಗಿ ಆಗುತ್ತಿಲ್ಲ. ಉತ್ತಮ ಪುಸ್ತಕಗಳು ಸಹ ಸರಿಯಾಗಿ ಸಿಗುತ್ತಿಲ್ಲ ಎಂದರು. ವಿ.ವಿ. ಪ್ರಕಟಿಸಿದ ಪುಸ್ತಕಗಳು ವಿ.ವಿ.ದಲ್ಲಿ ಮಾತ್ರ ದೊರಕುವಂತಾಗಿದೆ. ಹೀಗೆ ಆಯಾಯ ಸಂಘ ಸಂಸ್ಥೆಗಳು ಪ್ರಕಟಿಸುವ ಪುಸ್ತಕಗಳು ಅವುಗಳ ಸೀಮಿತ ಪರಿಧಿಯಲ್ಲೇ ಮಾರಾಟವಾಗುತ್ತಿವೆ. ಈ ಎಲ್ಲ ಹಿನ್ನೆಲೆಯಲ್ಲಿ ಪುಸ್ತಕ ಮಾರಾಟಕ್ಕೆ ಒಂದು ವ್ಯವಸ್ಥಿತ ಜಾಲವನ್ನು ಸೃಷ್ಟಿಸುವ ಪ್ರಸ್ತಾವನೆಯಿದೆ. ಉತ್ತಮ ಪುಸ್ತಕಗಳು ಕನ್ನಡದ ಎಲ್ಲರಿಗೂ ಓದಲು ಸಿಗುವಂತಾಗಬೇಕು ಎಂಬುದು ಪ್ರಾಧಿಕಾರದ ಉದ್ದೇಶ ಎಂದು ಅವರು ಹೇಳಿದರು. ಈ ಕೆಲಸವನ್ನು ಖಾಸಗಿ ಪುಸ್ತಕ ಪ್ರಕಾಶನದವರು, ಸರ್ಕಾರ, ವಿ.ವಿ. ಹೀಗೆ ಎಲ್ಲರನ್ನೂ ಸೇರಿಸಿ ಮಾಡಬೇಕಾಗಿದೆ ಎಂದು ಹೇಳಿದರು.

ಇದೊಂದು ಅತ್ಯುತ್ತಮವಾದ ಯೋಚನೆಯಾಗಿದ್ದು ಪ್ರಾಧಿಕಾರ ಇದನ್ನು ರೂಪಿಸಿದ್ದೇ ಆದಲ್ಲಿ ಕನ್ನಡ ಪುಸ್ತಕೋದ್ಯಮದಲ್ಲಿರುವ ಎಲ್ಲ ಸಮಸ್ಯೆಗಳಿಗೂ, ಸರ್ಕಾರದ ಸಗಟು ಖರೀದಿ ಗೊಂದಲಗಳಿಗೂ ಉತ್ತರ ಸಿಕ್ಕಂತಾಗುತ್ತದೆ.

**೩. ಟಿ.ಎನ್. ಮಹದೇವಯ್ಯನವರ 'ಬದುಕು-ಬರಹ' ಕುರಿತು ಕಾರ್ಯಕ್ರಮ**

ಟಿ.ಎನ್. ಮಹದೇವಯ್ಯನವರ 'ಬದುಕು-ಬರಹ' ಕುರಿತು ದಿನಾಂಕ ೧-೨-೨೦೦೩ ರಂದು ತುಮಕೂರಿನ ವಿದ್ಯೋದಯ ಕಾನೂನು ಕಾಲೇಜಿನ ಸಭಾಂಗಣದಲ್ಲಿ ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ವಿವಿಧ ಕಾರ್ಯಕ್ರಮಗಳನ್ನು ನಡೆಸಲಾಯಿತು. ಕಾರ್ಯಕ್ರಮದ ಉದ್ಘಾಟನೆ ಡಾ।। ಪಾಟೀಲ ಪುಟ್ಟಪ್ಪನವರು ನೆರವೇರಿಸಿದರು. ಟಿ.ಎನ್. ಮಹದೇವಯ್ಯನವರ 'ಆಯ್ದ ಕವನಗಳು', 'ಅನುಭವ ಮಂಟಪ', 'ಆರ್ಕಿಮಿಡೀಸ್' ಕೃತಿಗಳನ್ನು ಕ್ರಮವಾಗಿ ಪ್ರೊ।। ಜಿ.ಎಸ್. ಸಿದ್ಧಲಿಂಗಯ್ಯ, ಪ್ರೊ।। ಎನ್. ಬಸವಾರಾಧ್ಯ, ಡಾ।। ವಿದ್ಯಾಶಂಕರ್ ಬಿಡುಗಡೆ ಮಾಡಿದರು. ಖ್ಯಾತ ವಕೀಲ ಪ್ರೊ।। ಹೆಚ್.ಎಸ್. ಶೇಷಾದ್ರಿ ಅಧ್ಯಕ್ಷತೆ ವಹಿಸಿದ್ದರು. ಅಂದು ನಡೆದ ಮೊದಲನೆ ಗೋಷ್ಠಿಯ ಅಧ್ಯಕ್ಷತೆಯನ್ನು ಡಾ।। ಡಿ.ಕೆ. ರಾಜೇಂದ್ರ ವಹಿಸಿದ್ದರು. ಪ್ರೊ।। ಕೆ.ಜಿ. ನಾಗರಾಜಪ್ಪ, ಶ್ರೀಮತಿ ಹೆಚ್.ಎಲ್. ಪುಷ್ಪ, ಪ್ರೊ।। ಎಂ.ಹೆಚ್. ಕೃಷ್ಣಯ್ಯ ಗೋಷ್ಠಿಯಲ್ಲಿ ಮಾತನಾಡಿದರು. ಮಧ್ಯಾಹ್ನ ನಡೆದ ೨ನೇ ಗೋಷ್ಠಿಯ ಅಧ್ಯಕ್ಷತೆಯನ್ನು ಪ್ರೊ।। ಹೆಚ್.ಜಿ. ಸಣ್ಣಗುಡ್ಡಯ್ಯ ವಹಿಸಿದ್ದರು. ಗೋಷ್ಠಿಯಲ್ಲಿ ಡಾ।। ಮಂಗಳಾ ಪ್ರಿಯದರ್ಶಿನಿ, ಪ್ರೊ।। ಜಿ. ಅಶ್ವತ್ಥನಾರಾಯಣ, ಡಾ।। ವಿಜಯ ಸುಬ್ಬರಾಜ್, ಪ್ರೊ।। ಅ.ರಾ. ಮಿತ್ರ ಭಾಷಣ ಮಾಡಿದರು. ಅಂದು ಸಂಜೆ ಪ್ರೊ।। ಜಿ.ಎಸ್. ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿ ನಡೆಯಿತು. ಸುಮಾರು ೨೫ ಜನ ಕವಿಗಳು ಭಾಗವಹಿಸಿದ್ದರು.

ಬಿ. ವೀರಭದ್ರಪ್ಪನವರ ಪರಿಶ್ರಮದಿಂದ ಪ್ರತಿಷ್ಠಾನದಲ್ಲಿ ಇವರ ಹೆಸರಿನಲ್ಲಿ ಒಂದು ದತ್ತಿ ನಿಧಿ ಸ್ಥಾಪನೆಯಾಗಿದ್ದು ಪ್ರತಿವರ್ಷ ಇವರನ್ನು ಕುರಿತ ಕಾರ್ಯಕ್ರಮವನ್ನು ನಡೆಸಲಾಗುತ್ತದೆ.

**೪. ಅಖಿಲ ಭಾರತ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನ :**

ಬೆಳಗಾವಿಯಲ್ಲಿ ಮಾರ್ಚ್ ೭,೮,೯, ೨೦೦೩ರಂದು ನಡೆದ ಕನ್ನಡ ಸಾಹಿತ್ಯ ಸಮ್ಮೇಳನ ಅದ್ದೂರಿಯಾಗಿ ಯಾವ ವಿವಾದವೂ ಇಲ್ಲದೆ ಯಶಸ್ವಿಯಾಯಿತು. ಸಮ್ಮೇಳನಗಳು ಒಂದಕ್ಕಿಂತ ಒಂದು ಅದ್ದೂರಿ ಹಾಗೂ ಭಾರಿ ವೆಚ್ಚದ ಸಂಘಟನೆಯಾಗುತ್ತಿರುವುದು ಆತಂಕಕಾರಿಯಾಗುತ್ತಿದೆ. ಇಂತಹ ವ್ಯವಸ್ಥೆಯು ಪ್ರತಿ ವರ್ಷವೂ ಸಾಧ್ಯವಾಗದೆ ಕೊನೆಗೆ ನಮ್ಮ ಹಿಂದಿನ ಸೂಚನೆಯಂತೆ ಮೂರು ವರ್ಷಕ್ಕೊಮ್ಮೆ ನಡೆಯುವ ಕಾಲ ದೂರವಿಲ್ಲ. ಸಮ್ಮೇಳನದಲ್ಲಿ ಎಂದಿನಂತೆ ಉಪಯುಕ್ತ ಗೋಷ್ಠಿಗಳು, ಚರ್ಚೆಗಳು ನಡೆದು ಗಡಿನಾಡಿನಲ್ಲಿ ಕನ್ನಡದ ಧ್ವಜವನ್ನು ಎತ್ತಿ ಹಿಡಿಯುವಲ್ಲಿ ಯಶಸ್ವಿಯಾಯಿತು. ಆದರೆ ಪುಸ್ತಕ ಪ್ರದರ್ಶನಕ್ಕೆ ಸರಿಯಾದ ಜಾಗವಿಲ್ಲದೆ ಅಸ್ತವ್ಯಸ್ತವಾಯಿತು.

**ನಾಡೋಜ ಡಾ|| ಪಾಟೀಲ ಪುಟ್ಟಪ್ಪನವರ ಅಧ್ಯಕ್ಷ ಭಾಷಣದ ಮುಖ್ಯಾಂಶಗಳು :**

ಪ್ರಾದೇಶಿಕ ಅಸಮಾನತೆ ಕರ್ನಾಟಕದ ಯಾವ ಪ್ರದೇಶದಲ್ಲಿಯೂ ಇರಬಾರದು. ಈ ಅಸಮಾನತೆಯೇ ಅತೃಪ್ತಿ, ಅಸಮಾಧಾನಗಳಿಗೆ ಕಾರಣವಾಗುತ್ತದೆ. ನಿನ್ನೆ ಏನಾಯಿತು ಎನ್ನುವ ಪ್ರಶ್ನೆಗೆ ಈಗ ಯಾವ ಅರ್ಥವೂ ಇಲ್ಲ. ಇಂದು ಏನು ಮಾಡಿದರೆ ಕರ್ನಾಟಕ ಸರಿಯಾಗಿ ಬೆಳೆಯುತ್ತದೆ ಎನ್ನುವುದೊಂದೇ ನಮ್ಮ ಗಮನದಲ್ಲಿರಬೇಕು.

ಮಹಾರಾಷ್ಟ್ರದವರು ಏನು ಮಾಡಿದರೂ, ಹತ್ತು ಜನ್ಮ ಕಳೆದು ಬಂದರೂ ಬೆಳಗಾವಿ ಅವರದಾಗುವುದಿಲ್ಲ. ಈ ಸಂಗತಿ ಮಹಾರಾಷ್ಟ್ರದ ಮಾಜಿ ಮುಖ್ಯಮಂತ್ರಿ ಶರದ ಪವಾರರಿಗೆ ಮನವರಿಕೆ ಆಗಿದೆ. ಕರ್ನಾಟಕದವರು ಏನು ಕೊಡುತ್ತಾರೆ ಅದನ್ನು ತೆಗೆದುಕೊಂಡು ತಾವು ಮಹಾರಾಷ್ಟ್ರದವರು ಕರ್ನಾಟಕಕ್ಕೆ ಏನು ಕೊಡಬೇಕಾಗಿದೆಯೋ ಅದನ್ನು ಅವರಿಗೆ ಕೊಟ್ಟು ಈ ವಿವಾದದ ಪ್ರಶ್ನೆಯನ್ನೇ ಕೊನೆಗೊಳಿಸಬೇಕೆಂದು ಅವರು ಎಂ.ಇ.ಎಸ್. ಜನರಿಗೆ ಹೇಳಿದ್ದಾರೆ. ಬೆಳಗಾವಿ ಮಹಾರಾಷ್ಟ್ರಕ್ಕೆ ಸಿಕ್ಕಲಾರದು ಎನ್ನುವ ಮಾತನ್ನು ಹೇಳಿದ್ದ ಅವರು "ಬೆಳಗಾವಿ ಹಾಗೂ ಗಡಿ ಪ್ರಶ್ನೆಯನ್ನು ಒಂದು ದಂಧೆ ಮಾಡಿಕೊಂಡಿದೀರೇನು" ಎಂದು ಅವರನ್ನು ಬಹು ಮೊನಚಾಗಿ ಕೇಳಿದ್ದರು.

ಈಗ ಕೇಂದ್ರ ಸರ್ಕಾರವು ಮಹಾಜನ ವರದಿಯ ವಿಚಾರದಲ್ಲಿ ಯಾವ ಮೀನಮೇಷವನ್ನೂ ಎಣಿಸದೇ ಅದನ್ನು ಯಥಾವತ್ತಾಗಿ ಕಾರ್ಯರೂಪಕ್ಕೆ ತರಲು ಮುಂದಾಗಬೇಕು.

ಕೇರಳದಲ್ಲಿರುವ ಕಾಸರಗೋಡು ಕರ್ನಾಟಕದ್ದೇ ಆಗಿದೆ. ಅದನ್ನು ದುರುದ್ದೇಶದಿಂದ ಕೇರಳದಲ್ಲೇ ಇರಿಸಲಾಗಿದೆ. ಇದಂತೂ ಸರಿಯೇ, ಬೆಳಗಾವಿಗೆ ಏನಾದೀತೋ ಎನ್ನುವ ಹೆದರಿಕೆಯನ್ನು ಮನಸಿನಲ್ಲಿ ತಂದುಕೊಂಡು ಕರ್ನಾಟಕವು ಕಾಸರಗೋಡನ್ನು ಕೈ ಬಿಡಬಾರದು. ಕರ್ನಾಟಕದ ಅಪ್ಪಟ ಕನ್ನಡ ಸಂಸ್ಕೃತಿ ಕಾಸರಗೋಡಿನಲ್ಲಿಯೂ ಇದೆ. ಅದು ತಮ್ಮದೆಂದು ಸಾಧಿಸುವ ಯಾವ ಸಾಕ್ಷಿ ಪುರಾವೆಗಳೂ ಕೇರಳದ ಬಳಿ ಇಲ್ಲ.

ಹೊರನಾಡಿನಲ್ಲಿ ಕನ್ನಡ ಸಂಸ್ಕೃತಿ ಉಳಿಸಿ ಬೆಳೆಸುವ ಕಾರ್ಯ ಆಗಬೇಕಾಗಿದೆ. ಅದೇ ರೀತಿ ಕರ್ನಾಟಕದ ಗಡಿಯಾಚೆ ಇರುವ ಕನ್ನಡಿಗರ ಬಗ್ಗೆ ಅವರು ಮಹಾರಾಷ್ಟ್ರದಲ್ಲೇ ಇರಲಿ, ಆಂಧ್ರಪ್ರದೇಶದಲ್ಲಿಯೇ ಇರಲಿ, ತಮಿಳುನಾಡಿನಲ್ಲಿಯೇ ಇರಲಿ, ಅವರು ತಮಗೆ

ಸಂಬಂಧಿಸಿದವರೆನ್ನುವ ಕಾಳಜ ಹಾಗೂ ಕಕ್ಕುಲಾತಿ ಇರಬೇಕು. ಆದರೆ ಅದರ ಅಭಾವ ಕರ್ನಾಟಕದಲ್ಲಿ ಕಾಣಸಿಕೊಂಡಿದೆ.

**ಕನ್ನಡ ಪುಸ್ತಕ ಪ್ರಕಟಣೆ ಹಾಗೂ ಗ್ರಂಥಾಲಯಗಳ ಬೆಳವಣಿಗೆ :** ಕನ್ನಡದ ಕೆಲಸಕ್ಕೆ ಹಾಗೂ ಗ್ರಂಥಗಾರಿಕೆಗೆ ಹುಲುಸು ಬರಬೇಕಾದರೆ ಗ್ರಂಥಾಲಯ ಇಲಾಖೆಯನ್ನು ಬಲಪಡಿಸಬೇಕಾದ ಅವಶ್ಯಕತೆ ಇದೆ. ರಾಜ್ಯದಲ್ಲಿ ಗ್ರಂಥಾಲಯ ಸೇವೆ ವ್ಯಾಪಕವಾಗಿ ಹಬ್ಬಿಕೊಳ್ಳಬೇಕು. ಅದರಲ್ಲಿ ತರಬೇತಿ ಪಡೆದ ಗ್ರಂಥಪಾಲಕರು ನೇಮಕಗೊಳ್ಳಬೇಕು. ಈ ರಾಜ್ಯದಲ್ಲಿ ಆರಂಭಗೊಂಡ ಪ್ರತಿಯೊಂದು ಗ್ರಂಥಾಲಯಕ್ಕೆ ರಾಜ್ಯದಲ್ಲಿ ಪ್ರಕಟವಾದ ಎಲ್ಲ ಪುಸ್ತಕಗಳೂ ಲಭಿಸಬೇಕು. ಈ ಗ್ರಂಥಾಲಯಗಳು ಪುಸ್ತಕಗಳನ್ನು ಕೊಳ್ಳುವುದಾದರೆ ಯಾವ ಲೇಖಕನೂ ತನ್ನ ಪುಸ್ತಕ ಮಾರಾಟವಾಗಿಲ್ಲವೆಂದು ಹಳಹಳಿ ಪಡಬೇಕಾದುದಿಲ್ಲ. ಒಬ್ಬ ಲೇಖಕ ಬರೆದ ಪುಸ್ತಕಗಳು ಯಾವ ಭಿಡೆ ಮುರವತ್ತುಗಳಿಗೂ ಒಳಗಾಗದೇ ರಾಜ್ಯದ ಗ್ರಂಥಾಲಯಗಳಿಗೆ ಹೋಗಬೇಕು.

**ಸಾಹಿತಿ ಹೃದಯಗಳಿಗೆ ಸೇತುವೆ ಕಟ್ಟಬೇಕು :** ನಮ್ಮ ಸಾಹಿತಿಗಳಿಂದ ಸಾಹಿತ್ಯ ಕ್ಷೇತ್ರದಿಂದ ಜನರು ಬಹಳಷ್ಟನ್ನು ನಿರೀಕ್ಷಿಸಿದ್ದಾರೆ. ಸಾಹಿತಿಗಳು ತಾವು ಇನ್ನೊಬ್ಬರಿಗೆ ಹೇಳುವುದನ್ನು ಅವರು ತಮ್ಮ ಜೀವನದಲ್ಲಿ ತೋರಿಸಿಕೊಡಬೇಕೆಂದು ಜನರು ಅಪೇಕ್ಷಿಸುತ್ತಾರೆ. ಕವಿ, ಸಾಹಿತಿಗಳನ್ನು ಶೆಲ್ಲಿ ಜಗತ್ತಿನ ಅನಧಿಕೃತ ಶಾಸಕರೆಂದು ಕರೆದಿದ್ದಾನೆ. ಆ ಮಾತಿಗೆ ಸಾಕ್ಷಿ ಎನಿಸುವಂತೆ ಅವರು ಬದುಕಬೇಕು.

**ಆಡಳಿತದಲ್ಲಿ ಕನ್ನಡ :** ಸರಕಾರದ ಕೇಂದ್ರ ಸ್ಥಳವಾದ ವಿಧಾನಸೌಧದಲ್ಲಿರುವ ಹಿರಿಯ ಅಧಿಕಾರಿಗಳಲ್ಲಿ ಕನ್ನಡದ ಬಗೆಗೆ ಇರಬೇಕಾದ ಆಸಕ್ತಿ ಇಲ್ಲ. 'ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ' ಎಂಬಂತೆ ಅವರಿಂದ ಕನ್ನಡದ ಕೆಲಸ ನಡೆದಿದೆ. ಕನ್ನಡ ಉಪಯೋಗದಲ್ಲಿ ಅವರು ಪರಿಣತಿ ಪಡೆದಿದ್ದಾರೆನ್ನುವುದನ್ನು ಅವರು ತೆಗೆದುಕೊಂಡ ಇಲಾಖೆ ಪರೀಕ್ಷೆಗಳು ಹೇಳುತ್ತವೆ. ಅವುಗಳ ಆಧಾರದ ಮೇಲೆ ಅವರ ಸಂಬಳದ ಹೆಚ್ಚಳಿಕೆಯನ್ನು, ಪದೋನ್ನತಿಯನ್ನು ನೋಡಿದರೆ ಕನ್ನಡ ಸಂಬಂಧದ ಇಲಾಖಾ ಪರೀಕ್ಷೆಗಳು ಪೊಳ್ಳು ಬೋಗಸ್ ಎಂದು ಅವು ಹೇಳುತ್ತವೆ.

ಸುಳ್ಳು ಪರೀಕ್ಷೆ ತೆಗೆದುಕೊಂಡವರನ್ನು, ಅವರಿಗೆ ಸುಳ್ಳು ಪ್ರಮಾಣಪತ್ರ ಕೊಟ್ಟವರನ್ನು ಭ್ರಷ್ಟರೆಂದು ಪರಿಗಣಿಸಿ ಅವರನ್ನು ದಂಡಿಸಬೇಕು. ಅವರು ಪಡೆದುಕೊಂಡಿರುವ ಹಣಕಾಸಿನ ಸೌಲಭ್ಯಗಳನ್ನು ಅವರಿಂದ ಮರಳಿ ಪಡೆದು, ಸುಳ್ಳು ದಾಖಲೆ ಸೃಷ್ಟಿಸಿ, ಅವುಗಳ ಆಧಾರದ ಮೇಲೆ ಪದೋನ್ನತಿ ಪಡೆದುದನ್ನು ಅವರಿಂದ ಕಸಿದುಕೊಳ್ಳಬೇಕು.

**ಬರಗೂರು ವರದಿ ಜಾರಿಗೆ ಬರಲಿ :** ಈಗ ಸರಕಾರವು ಕನ್ನಡ ಶಾಲೆಗಳಲ್ಲಿ ಮೂರನೆ ತರಗತಿಯಿಂದ ಇಂಗ್ಲಿಷನ್ನು ದ್ವಿತೀಯ ಭಾಷೆಯೆಂದು ಕಲಿಸಲು ಮುಂದಾಗಿದೆ. ಕನ್ನಡ ಶಾಲೆಗಳಲ್ಲಿ ಇಂಗ್ಲಿಷನ್ನು ತರಬೇಕೆನ್ನುವ ಬರಗೂರು ವರದಿಯನ್ನು ಒಪ್ಪಿದೆ. ಆದರೆ ಇಂಗ್ಲಿಷ್ ಶಾಲೆಗಳಲ್ಲಿ ಕನ್ನಡವನ್ನು ತರಬೇಕೆನ್ನುವ ಬರಗೂರು ಶಿಫಾರಿಸ್ಸಿನ ಬಗೆಗೆ ಸರಕಾರ ಕುರುಡು ತೋರಿದೆ. ಹಾಗಾದರೆ, ಸರಕಾರಕ್ಕೆ ಇಂಗ್ಲಿಷ್ ಬೇಕು, ಕನ್ನಡ ಬೇಡವೆಂದು ಅರ್ಥವೋ?

ರಾಜ್ಯದ ಪ್ರಾಥಮಿಕ ಶಾಲೆಗಳಲ್ಲಿ ಇಂಗ್ಲಿಷನ್ನು ದ್ವಿತೀಯ ಭಾಷೆಯೆಂದು ಕಲಿಸಬೇಕೆನ್ನುವ ತೀರ್ಮಾನವನ್ನು ಸರಕಾರವು ಕೈಕೊಂಡ ಮೇಲೆ ಈ ರಾಜ್ಯದಲ್ಲಿ ಪ್ರತ್ಯೇಕ ಇಂಗ್ಲಿಷ್ ಶಾಲೆಗಳು ಇರಬೇಕಾದ ಅವಶ್ಯಕತೆ ಏನಿದೆ?

**ಲೋಕಸೇವಾ ಆಯೋಗದಲ್ಲಿ ಕನ್ನಡ :** ರಾಜ್ಯದಲ್ಲಿ ಲೋಕಸೇವಾ ಆಯೋಗ ಇದೆ. ಅದರಲ್ಲಿ ಎಸ್.ಎಸ್.ಎಲ್.ಸಿ. ಮಟ್ಟದ ಕನ್ನಡ ಕಲಿಕೆ ಕಡ್ಡಾಯವಾಗಬೇಕು. ಸಂದರ್ಶನಕ್ಕೆ ಬರುವ ಅಭ್ಯರ್ಥಿಗಳಿಗೆ ಏನೇ ಕೇಳುವುದಿದ್ದರೂ ಆ ಪ್ರಶ್ನೆಗಳು ಕನ್ನಡದಲ್ಲಿ ಇರಬೇಕಲ್ಲದೆ ಯಾವ ಕಾರಣದಿಂದಲೂ ಇಂಗ್ಲಿಷಿನಲ್ಲಿ ಇರಬಾರದು. ಹೊರ ರಾಜ್ಯಗಳಿಂದ ಕರ್ನಾಟಕ ಸೇವಾ ವ್ಯವಸ್ಥೆಯೊಳಗೆ ನುಗ್ಗಿ ಬರಬೇಕೆನ್ನುವವರನ್ನು ನಿಯಂತ್ರಿಸಿದಂತಾಗುತ್ತದೆ.

**ಕನ್ನಡ ಪುಸ್ತಕಗಳ ಸಗಟು ಖರೀದಿ :** ಪುಸ್ತಕಗಳನ್ನು ಕೊಳ್ಳುವ ಗ್ರಂಥಾಲಯ ಪ್ರಾಧಿಕಾರದ ಜನರಿಗೆ ಶೇಕಡಾವಾರು ಹಣ ಸಂದಾಯವಾಗುವುದಕ್ಕೆ ಅವಕಾಶವಿಲ್ಲದಂತೆ, ಇಷ್ಟು ಪುಟಗಳ ಪುಸ್ತಕಕ್ಕೆ ಇಷ್ಟು ಬೆಲೆಯೆಂದು ನಿಗದಿಸಬೇಕು. ಗ್ರಂಥಾಲಯ ಪ್ರಾಧಿಕಾರವು ಒಬ್ಬ ಲೇಖಕನ ಪುಸ್ತಕದ ೧೦೦೦ ಪ್ರತಿಗಳನ್ನಾದರೂ ಕೊಳ್ಳಬೇಕು. ಗ್ರಂಥಾಲಯಗಳ ಸಂಖ್ಯೆ ಬೆಳೆಯುತ್ತಿರುವುದರಿಂದ ಕೊಳ್ಳುವ ಪುಸ್ತಕಗಳ ಸಂಖ್ಯೆಯೂ ಹೆಚ್ಚಾಗಬೇಕು.

**೫. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ - 'ನವೋದಯ ಹರಿಕಾರರು' ಸಂವಾದ ಕಾರ್ಯಕ್ರಮ**

ಇದನ್ನೊಂದು ಕಾರ್ಯಕ್ರಮ ಮಾಲಿಕೆಯಾಗಿ ರೂಪಿಸಿರುವ ಇಲಾಖೆ ಬಿ.ಎಂ.ಶ್ರೀ ಬಗ್ಗೆ ದಿನಾಂಕ ೬-೯-೦೩ರಂದು 'ನಯನ' ಸಭಾಂಗಣದಲ್ಲಿ ನಡೆಸಿದ ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರೊ॥ ಜಿ. ವೆಂಕಟಸುಬ್ಬಯ್ಯ ವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ, ಶ್ರೀ ಶ್ರೀನಿವಾಸ ಹಾವನೂರು, ಡಾ॥ ಹಂಪ ನಾಗರಾಜಯ್ಯ, ಡಾ॥ ಎಂ. ಚಿದಾನಂದಮೂರ್ತಿ, ಪ್ರೊ॥ ಬೆ. ಶ್ರೀನಿವಾಸರಾಜು, ಪ್ರೊ॥ ಎಚ್.ಎಸ್. ರಾಘವೇಂದ್ರರಾವ್, ಶ್ರೀಮತಿ ಸುಮಾ ಭಾಗವಹಿಸಿದ್ದರು.

**ಮರೆಯಲಾಗದ ಮಹನೀಯರು - ಬಿ.ಎಂ.ಶ್ರೀ**

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಹೋಸದಾಗಿ ಪ್ರಾರಂಭಿಸಿರುವ ತಿಂಗಳ ಕಾರ್ಯಕ್ರಮಗಳಡಿಯಲ್ಲಿ ಪ್ರಥಮ ಕಾರ್ಯಕ್ರಮವನ್ನು ದಿನಾಂಕ 6-3-03 ರಂದು 'ನಯನ' ಸಭಾಂಗಣದಲ್ಲಿ ಏರ್ಪಡಿಸಿತ್ತು. ಶ್ರೀಮತಿ ರಾಣಿ ಸತೀಶ್‌ರವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಡಾ॥ ಜಿ.ಎಸ್. ಶಿವರುದ್ರಪ್ಪ ಮತ್ತು ಪ್ರೊ॥ ಕೆ.ಎಸ್. ನಿಸಾರ್ ಅಹಮದ್‌ರವರು ಬಿ.ಎಂ.ಶ್ರೀ. ಬಗ್ಗೆ ಮಾತನಾಡಿದರು. ಸಂವಾದದಲ್ಲಿ ಪ್ರೊ॥ ಎಂ.ಎಚ್. ಕೃಷ್ಣಯ್ಯ, ಡಾ॥ ಸಿದ್ದಲಿಂಗಯ್ಯ, ಡಾ॥ ಹೆಚ್. ಎಸ್. ವೆಂಕಟೇಶಮೂರ್ತಿ ಮತ್ತು ಡಾ॥ ಬಸವರಾಜ ಕಲ್ಗುಡಿ ಭಾಗವಹಿಸಿದ್ದರು.

**೬. ಕನ್ನಡ ಅನುಷ್ಠಾನಕ್ಕೆ ಸ್ಪಂದಿಸದ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ**

ಆಡಳಿತದಲ್ಲಿ ಕನ್ನಡ ಅನುಷ್ಠಾನಗೊಳಿಸುವಲ್ಲಿ ಸ್ಪಂದಿಸದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲಾಗುತ್ತದೆ ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ನಡೆಸಿದ ಸ್ಪಷ್ಟಪಡಸಿದೆ. ಆಡಳಿತದಲ್ಲಿ ಕನ್ನಡದ ಅನುಷ್ಠಾನ ಹಾಗೂ ವಿವಿಧ ಇಲಾಖೆಗಳಲ್ಲಿ ಕನ್ನಡದ ಬಳಕೆಯ ಪ್ರಗತಿ ಪರಿಶೀಲನಾ ಸಭೆಯಲ್ಲಿ ಮಾತನಾಡುತ್ತಿದ್ದರು.

ಜನತೆಗೆ ಅರ್ಥವಾಗುವ ಸ್ಥಳೀಯ ಭಾಷೆಯಲ್ಲಿಯೇ ಆಡಳಿತ ನಡೆಯಬೇಕು. ಸ್ಥಳೀಯ ಭಾಷೆಯಲ್ಲಿ ಆಡಳಿತ ನಡೆಯಬೇಕು. ಸ್ಥಳೀಯ ಭಾಷೆಯಲ್ಲಿ ಆಡಳಿತ ನಡೆಸುವುದು ಪ್ರಜಾಪ್ರಭುತ್ವದ ಮೂಲ ಸಿದ್ಧಾಂತವೂ ಕೂಡ. ಕಾರಣ ಅಧಿಕಾರಿಗಳು, ಜನಪ್ರತಿನಿಧಿಗಳು ರಾಜ್ಯದ ಆಡಳಿತ ಭಾಷೆಯಾದ ಕನ್ನಡದಲ್ಲಿಯೇ ವ್ಯವಹರಿಸಬೇಕು.

ಆಡಳಿತ ಸಂಪೂರ್ಣ ಕನ್ನಡಮಯವಾಗಬೇಕು. ಇದಕ್ಕೆ ಸ್ಪಂದಿಸದ ಅಧಿಕಾರಿಗಳ, ಸಿಬ್ಬಂದಿಯ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲಾಗುತ್ತದೆ. ಆಡಳಿತದಲ್ಲಿ ಕನ್ನಡ ಬಳಸದ, ಬಳಕೆಗೆ ಸ್ಪಂದಿಸದ ರಾಜ್ಯದ ೬೦ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ ಕೈಗೊಳ್ಳಲು ಈ ಹಿಂದಿನ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರುಗಳು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದಾರೆ.

ಇವರಲ್ಲಿ ೫ ಐ.ಎ.ಎಸ್. ಅಧಿಕಾರಿಗಳೂ ಸೇರ್ಪಡೆ ಆಗಿದ್ದಾರೆ. ಅವರಂತೆಯೇ ನಾವೂ ಕೂಡ ಕನ್ನಡ ಬಳಸದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳಲು ಹಿಂಜರಿಯುವುದಿಲ್ಲ. ಈ ವಿಷಯದಲ್ಲಿ ದಯೆ, ದಾಕ್ಷಿಣ್ಯ ಇಲ್ಲ. ಆಡಳಿತದಲ್ಲಿ ಕನ್ನಡವನ್ನು ಸಮರ್ಪಕವಾಗಿ ಬಳಸುತ್ತಿಲ್ಲ ಎಂದು ರಾಜ್ಯದ ವಿವಿಧ ರಾಜ್ಯದ ವಿವಿಧ ಜಿಲ್ಲೆಗಳಿಂದ ಪ್ರತಿದಿನವೂ ಲ೦೦ಕ್ಕೂ ಹೆಚ್ಚಿನ ದೂರುಗಳು ಬರುತ್ತಿವೆ. ದೂರಿನ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಿದೆ.

ಈ ದೂರುಗಳನ್ನು ಕನ್ನಡ ಅನುಷ್ಠಾನ ಸಮಿತಿಯ ಅಧ್ಯಕ್ಷರು, ಅಧಿಕಾರಿಗಳು ಪರಿಶೀಲಿಸಿ ಕ್ರಮಗೊಳ್ಳುವ ಪರಿಸ್ಥಿತಿ ನಿರ್ಮಾಣ ಆಗಿದೆ. ಈ ಬಗ್ಗೆ ಪ್ರಾಧಿಕಾರದ ಅಧ್ಯಕ್ಷರು ಅನೀರಿಕ್ಷಿತ ಭೇಟಿ ನೀಡಿ ಪರಿಶೀಲಿಸುವುದಾಗಿ ಅಧಿಕಾರಿಗಳನ್ನು ಎಚ್ಚರಿಸಿದೆ.

ಆಡಳಿತದಲ್ಲಿ ಪಾರದರ್ಶಕತೆ ಕಾಪಾಡಲು ಅಧಿಕಾರಿಗಳು ಪ್ರಾಮಾಣಿಕವಾಗಿ ಶ್ರಮಿಸಬೇಕು. ಈ ಕಾರಣಕ್ಕಾಗಿಯೇ ಜನರ ಆಡು ಭಾಷೆ ಆದ ಕನ್ನಡವನ್ನೇ ರಾಜ್ಯದ ಆಡಳಿತ ಭಾಷೆಯನ್ನಾಗಿ ಸರ್ಕಾರ ಘೋಷಿಸಿದೆ ಎಂದಿದೆ.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ನೂತನ ಅಧ್ಯಕ್ಷರಾದ ಬಿ.ಎ. ಇದಿನಬ್ಬ ಅವರು ಈ ಬಗ್ಗೆ ಇನ್ನೂ ಹೆಚ್ಚಿನ ಗಮನ ಹರಿಸಬೇಕಾಗಿದೆ. ಫ಼್ರಾದಿಕಾರದ ಆದೇಶಗಳನ್ನು ತಪ್ಪದೇ ಜಾರಿಗೊಳಿಸಬೇಕಾದ ಜವಾಬ್ದಾರಿಯನ್ನು ಅದಿಕಾರಿಗಳು ನಿರ್ವಹಿಸುವಂತಹ ವಾತಾವರಣ ರೂಪಿಸಬೇಕು, ಆಡಳಿತದಲ್ಲಿ ಕನ್ನಡವನ್ನು ಸಮರ್ಪಕವಾಗಿ ಬಳಸುವಲ್ಲಿ ಅಧಿಕಾರಿಗಳು ಮಹತ್ತರ ಪಾತ್ರ ವಹಿಸುತ್ತಾರೆ. ಆದ್ದರಿಂದ ಅವರು ಕನ್ನಡ ಪುಸ್ತಕಗಳನ್ನು ಓದಬೇಕು. ಭಾಷೆಯ ಕುರಿತು ನಿರಂತರ ಅಧ್ಯಯನ ನಡೆಸಬೇಕು. ಈ ಬಗ್ಗೆ ಅಧಿಕಾರಿಗಳು ಆಸಕ್ತಿ ಹೊಂದಬೇಕು.

**೭. 'ರಾಮಾನುಜರು ಮೇಲುಕೋಟೆಗೆ ಬಂದದ್ದು ಆಧಾರರಹಿತ', ವಿಷ್ಣುವರ್ಧನನ ಮತಾಂತರವೂ ಸಾಧುವಲ್ಲ:**

ರಾಮಾನುಜಾಚಾರ್ಯರು ಮೇಲುಕೋಟೆಗೆ ಬಂದಿದ್ದರು ಎಂಬುದಕ್ಕೆ ಐತಿಹಾಸಿಕ ಪುರಾವೆ ಇಲ್ಲ ಎಂದು ಹಿರಿಯ ವಿದ್ವಾಂಸ ಪ್ರೊ॥ ಎಸ್.ಕೆ. ರಾಮಚಂದ್ರರಾವ್ ಅವರುಡಾ॥ ಕಮಲಾ ಹಂಪನಾ ಅವರ ಬದ್ಧವಣ ಪುಸ್ತಕ ಬಿಡುಗಡೆ ಸಂದರ್ಭದಲ್ಲಿ ಹೇಳಿದ್ದಾರೆ.

ಹಾಗೊಮ್ಮೆ ಅವರು ಮೇಲುಕೋಟೆಗೆ ಬಂದಿದ್ದರೂ ಅದಕ್ಕಿಂತ ಮೊದಲೇ ಕರ್ನಾಟಕದಲ್ಲಿ ಶ್ರೀವೈಷ್ಣವ ಧರ್ಮ ಇತ್ತು. ರಾಜ ವಿಷ್ಣುವರ್ಧನ ಜೈನ ಧರ್ಮದಿಂದ ವೈಷ್ಣವ ಧರ್ಮಕ್ಕೆ ಮತಾಂತರ ಹೊಂದಿ ಬಿಟ್ಟಿದೇವ ಆದುದಕ್ಕೂ ಆಧಾರವಿಲ್ಲ. ಧರ್ಮದ ದೃಷ್ಟಿಯಿಂದ ಇದು ಸಾಧುವಾದುದೂ ಅಲ್ಲ.

**೮. ಪ್ರಾಚೀನ ಲಿಪಿ ಅಧ್ಯಯನ : ಕರ್ನಾಟಕದ ಎಂಜಿನಿಯರ್ ಸಾಧನೆ**

ಕರ್ನಾಟಕದ ನಿವೃತ್ತ ಎಂಜಿನಿಯರ್ ಒಬ್ಬರು ರೂಪಿಸಿದ ಹೊಸ ಸಾಫ್ಟ್‌ವೇರ್ ಒಂದು ಪುರಾತನ ಹಸ್ತಪ್ರತಿಗಳನ್ನು ಓದುವಲ್ಲಿ ಹೊಸ ಅಧ್ಯಾಯ ತೆರೆಯಲಿದೆ ಎಂಬ ಒಂದು ಸುದ್ದಿ ಈಚಿಗೆ ಪತ್ರಿಕೆಯಲ್ಲಿದೆ.

ನಿವೃತ್ತ ಮೆಕ್ಯಾನಿಕಲ್ ಎಂಜಿನಿಯರ್ ಆದ ಪಿ.ಟಿ. ನಾರಾಯಣ್ ಅವರು ನಿನ್ನೆ ಚೆನ್ನೈನಲ್ಲಿ ನಡೆದ ಹಸ್ತಪ್ರತಿಶಾಸ್ತ್ರ, ಪ್ರಾಚೀನ ಲಿಪಿ ಶಾಸ್ತ್ರ, ಪುರಾತನ ತಾಂತ್ರಿಕ ವಿಜ್ಞಾನಗಳ ಕುರಿತ ಏಳು ದಿನಗಳ ಸಮ್ಮೇಳನದ ಉದ್ಘಾಟನಾ ಸಮಾರಂಭದಲ್ಲಿ ಆ ಸಾಫ್ಟ್‌ವೇರ್ ಅನ್ನು ಪ್ರದರ್ಶಿಸಿ ಅದರ ಸಹಾಯದಿಂದ ಪ್ರಾಚೀನ ಲಿಪಿಗಳನ್ನು ಸಂಸ್ಕೃತ, ಕನ್ನಡ, ತಮಿಳು ಮತ್ತು ಹಿಂದಿ ಭಾಷೆಗಳಿಗೆ ಲಿಪ್ಯಂತರಿಸಬಹುದಾಗಿದೆ ಎಂದಿದ್ದಾರೆ. ಇದೊಂದು ಅತ್ಯುತ್ತಮ ಪ್ರಯತ್ನವಾಗಿದೆ. ಪಿ.ಟಿ. ನಾರಾಯಣ್ ಅವರು ಪ್ರಸ್ತುತ ಮೇಲುಕೋಟೆಯ ಸಂಸ್ಕೃತ ಸಂಶೋಧನೆ ಅಕಾಡೆಮಿಯ ವಿಭಾಗವಾದ ಸಂಸ್ಕೃತ ತಾಂತ್ರಿಕ ಸಂಶೋಧನೆ ಕೇಂದ್ರದಲ್ಲಿ (ಎಸಿಟಿಆರ್‌ಐಎಸ್) ಯೋಜನಾ ನಿರ್ದೇಶಕರಾಗಿ ಕೆಲಸ ಮಾಡುತ್ತಿದ್ದಾರೆ.

**ಗೋವಿಂದ ಪೈ ಸ್ಮಾರಕ ಸ್ವಾಗತ ಗೋಪುರ: ಹೊಸ ಗಡಿವಿವಾದ**

ಕೇರಳ ಕರ್ನಾಟಕ ಗಡಿ ಭಾಗವಾದ ತಲಪಾಡಿಯಲ್ಲಿ ಕೇರಳ ಸರ್ಕಾರ ನಿರ್ಮಿಸಲುದ್ದೇಶಿದ ಗೋವಿಂದ ಪೈ ಸ್ಮಾರಕ ಸ್ವಾಗತ ಕಮಾನಿಗೆ ಕರ್ನಾಟಕ ಹೆದ್ದಾರಿ ಇಲಾಖೆಯು ತಡೆಯೊಡಿದ್ದು ಕಾಸರಗೋಡು ಕನ್ನಡಿಗರು ಆಕ್ರೋಶ ವ್ಯಕ್ತಪಡಿಸಿದ್ದಾರೆಂಬ ಸುದ್ದಿ ಈಚಿಗೆ ಬಂದಿದೆ.

ಕೇರಳ ಸರಕಾರವು ಮಂಜೇಶ್ವರ ಗ್ರಾ.ಪಂ. ವತಿಯಿಂದ ಒಟ್ಟು ಹತ್ತು ಲಕ್ಷ ರೂ. ವ್ಯಯಿಸಿ ಬೃಹತ್ ಸ್ವಾಗತ ಗೋಪುರವನ್ನು ಕೇರಳ-ಕರ್ನಾಟಕ ಗಡಿ ಭಾಗವಾದ ತಲಪಾಡಿಯಲ್ಲಿ ಸ್ಥಾಪಿಸಲು ಉದ್ದೇಶಿಸಿದೆ. ಕೇರಳ ಸ್ಥಳೀಯಾಡಳಿತ ಖಾತೆ ಸಚಿವ ಚೆರ್ಕಳಂ ಅಬ್ದುಲ್ಲ ಗೋಪುರ ನಿರ್ಮಿಸಲು ಕೇಂದ್ರ ಸರ್ಕಾರ ಹಾಗೂ ಕೇರಳ ರಾಜ್ಯ ಸರಕಾರ ಲಿಖಿತ ಅನುಮತಿ ನೀಡಿದ್ದು, ಕರ್ನಾಟಕ ರಾಷ್ಟ್ರೀಯ ಹೆದ್ದಾರಿ ಇಲಾಖೆಯವರು ಕಾಮಗಾರಿಗೆ ಅಡ್ಡಿಪಡಿಸಿದ್ದಾರೆ.

ದಶಕಗಳಿಂದ ಮಲೆಯಾಳಿಗರ ನಿರ್ಲಕ್ಷ್ಯಕ್ಕೊಳಗಾಗಿರುವ ಮಂಜೇಶ್ವರದ ಗೋವಿಂದ ಪೈ ಸ್ಮಾರಕ ಕಟ್ಟಡಗಳು ಭೂತ ಬಂಗಲೆಯಂತಾಗಿವೆ, ತಲಪಾಡಿಯಿಂದ 80 ಮೀ. ಒಳಭಾಗದವರೆಗೆ ತಮ್ಮ ಇಲಾಖೆಗೆ ಒಳಪಡುವುದರಿಂದ ಇದು ಕರ್ನಾಟಕ ಭಾಗವಾಗಿದೆಯೆನ್ನುವುದು ಕರ್ನಾಟಕದ ವಾದ. ಮಂಜೇಶ್ವರದ ಚೆಕ್‌ಪೋಸ್ಟ್‌ವರೆಗೂ ಕರ್ನಾಟಕದ ಗಡಿಭಾಗವಾಗುತ್ತದೆಯೆಂಬುದು ಇವರ ವ್ಯಾಖ್ಯಾನ. ಕೇಂದ್ರ ಹೆದ್ದಾರಿ ಇಲಾಖೆಯ ತಿದ್ದುಪಡಿಯಲ್ಲಿ ಇದು ನಮೂದಿಸಿದೆಯೆಂದು ಹೇಳುವ ಕರ್ನಾಟಕ ಹೆದ್ದಾರಿ ಇಲಾಖೆಯವರಿಂದ ಇದೀಗ ಹೊಸದೊಂದು ಗಡಿವಿವಾದ ಉಂಟಾಗುವುದರಲ್ಲಿ ಯಾವುದೇ ಸಂದೇಹವಿಲ್ಲ.

ಕರ್ನಾಟಕ ಹೆದ್ದಾರಿ ಇಲಾಖೆಯ ಹೊಸದೊಂದು ಕಾನೂನಿನಿಂದ ತಲಪಾಡಿಯಲ್ಲಿ ನಿರ್ಮಾಣಗೊಳ್ಳಲಿರುವ ಬಸ್ಸು ನಿಲ್ದಾಣ, ವಾಣಿಜ್ಯ ಸಂಕೀರ್ಣಗಳಿಗೆ ಮಂಜೇಶ್ವರ ತಲಪಾಡಿಯ ಅಭಿವೃದ್ಧಿಯ ಕನಸು ಇನ್ನು ಕನಸಾಗಿಯೇ ಉಳಿಯುವುದರಲ್ಲಿ ಸಂದೇಹವಿಲ್ಲ. ಇದೀಗ ಸೃಷ್ಟಿಗೊಂಡಿರುವ ಗಡಿವಿವಾದ ಹೊಸದೊಂದು ಹೋರಾಟಕ್ಕೆ ನಾಂದಿಯಾಗುವುದು ಗೋಚರಗೊಂಡಿದೆ. ಇದರ ಬಗ್ಗೆ ಕಾಸರಗೋಡು ಕನ್ನಡಿಗರು ಗಮನ ಹರಿಸಿ ಇದನ್ನೇ ನೆಪವಾಗಿಟ್ಟುಕೊಂಡು ಗಡಿ ಹೋರಾಟವನ್ನು ತೀವ್ರವಾಗಿಸಿವಂತಾದರೆ!

# ಶತಮಾನೋತ್ಸವಗಳು

**1. ಎಚ್.ಎಲ್.ಎನ್. ಸಿಂಹ :** 25-7-1904ರಲ್ಲಿ ಜನಿಸಿದ ಇವರು ನಾಟಕಕಾರರು, ಚಲನಚಿತ್ರ ಸಾಹಿತಿ. ನಿರ್ದೇಶಕರಾಗಿ ಕನ್ನಡ ಚಲನಚಿತ್ರ ರಂಗಕ್ಕೆ ರಾಜ್‌ಕುಮಾರ್ ಅವರನ್ನು ಒಳಗೊಂಡಂತೆ ಅನೇಕ ಪ್ರಸಿದ್ಧ ನಟರನ್ನು, ಬಿ.ಆರ್. ಪಂತಲು ರಂತಹ ನಿರ್ದೇಶಕರನ್ನು ಪರಿಚಯಿಸಿದ ಕೀರ್ತಿ ಸಿಂಹ ಅವರದ್ದು. ಜನಪ್ರಿಯ 'ಸಂಸಾರ ನೌಕೆ' ನಾಟಕವನ್ನು ಬರೆದು ಕನ್ನಡ ಸಿನೆಮಾ ರಂಗ ಮತ್ತು ರಂಗಭೂಮಿ ಕ್ಷೇತ್ರದಲ್ಲೇ ಹೊಸ ಸಾಮಾಜಿಕ ವಸ್ತುವನ್ನು ಬಳಸಿ ಯಶಸ್ವಿಯಾದರು. ಇವರ ಶತಮಾನೋತ್ಸವ ವರ್ಷ ಇದಾಗಿದ್ದು 22-11-2003ರಂದು ರವೀಂದ್ರ ಕಲಾಕ್ಷೇತ್ರದಲ್ಲಿ ಡಾ|| ರಾಜ್‌ಕುಮಾರ್ ಅವರಿಂದ ಎಚ್.ಎಲ್.ಎನ್. ಸಿಂಹ ಶತಮಾನೋತ್ಸವವನ್ನು ಉದ್ಘಾಟಿಸಲಾಯಿತು. ಇದಕ್ಕಾಗಿ ರಚನೆಯಾಗಿರುವ ಶತಮಾನೋತ್ಸವ ಸಮಿತಿ ಇಡೀ ವರ್ಷ ಹಲವು ಕಾರ್ಯಕ್ರಮಗಳನ್ನು ನಡೆಸುವ ಯೋಜನೆ ರೂಪಿಸಿದ್ದು ಗೌರವಾಧ್ಯಕ್ಷರಾಗಿ ವಿ.ಎಸ್. ಕೃಷ್ಣಅಯ್ಯರ್ ಅಧ್ಯಕ್ಷರಾಗಿ ಮಾಸ್ಟರ್ ಹಿರಣ್ಣಯ್ಯ, ಕಾರ್ಯದರ್ಶಿಯಾಗಿ ಸಿ.ಆರ್. ಸಿಂಹ ಮತ್ತು ಅನೇಕ ಗಣ್ಯರೂ ಮಕ್ಕಳಾದ ಎಚ್.ಎಲ್. ಶೇಷಚಂದ್ರ ಅವರೂ ಇದ್ದಾರೆ.

**2. ಸಿದ್ದವನಹಳ್ಳಿ ಕೃಷ್ಣಶರ್ಮ :** ಲೇಖಕ, ವಿಚಾರವಾದಿ, ಸ್ವಾತಂತ್ರ್ಯ ಹೋರಾಟಗಾರ, ಪತ್ರಕರ್ತ, ಗಾಂಧಿಸಾಹಿತ್ಯ ಸಂಘದ ಸ್ಥಾಪಕ ಸಿದ್ಧವನಹಳ್ಳಿ ಕೃಷ್ಣಶರ್ಮ ಅವರ ಶತಮಾನೋತ್ಸವ ಜುಲೈ 4, 2004ರಿಂದ ಆರಂಭವಾಗುತ್ತದೆ. ವಿಶ್ವ ಕರ್ನಾಟಕ, ಸರ್ವೋದಯ, ಭೂದಾನ ಪತ್ರಿಕೆಗಳನ್ನು ನಡೆಸುತ್ತಿದ್ದ ಇವರು 'ಪಂಚಕುಟಿ' ಎಂಬ ಗಾಂಧೀಜಿ ಜೀವನ ಚರಿತ್ರೆ ಬರೆದಿದ್ದಾರೆ. ಅದು ಇಂದಿಗೂ ಜನಪ್ರಿಯವಾಗಿದೆ. ಅವರು ಸ್ಥಾಪಿಸಿದ ಮಲ್ಲೇಶ್ವರದ ಗಾಂಧೀಸಾಹಿತ್ಯ ಸಂಘ ಇಂದಿಗೂ ಅಸ್ತಿತ್ವದಲ್ಲಿದ್ದು ಸಿದ್ದವನಹಳ್ಳಿ ಕೃಷ್ಣಶರ್ಮ ಜನ್ಮ ಶತಮಾನೋತ್ಸವ ಸಮಿತಿಯ ಮೂಲಕ ಹಲವಾರು ರಚನಾತ್ಮಕ ಕಾರ್ಯಕ್ರಮಗಳನ್ನು ನಡೆಸಲು, ಪುಸ್ತಕಗಳನ್ನು ಪ್ರಕಟಿಸಲು ಮುಂದಾಗಿದೆ.

**3. ಆನಂದಕಂದ :** ಕನ್ನಡ ಸಾಹಿತ್ಯಲೋಕದಲ್ಲಿ ಆನಂದಕಂದ ಎಂದೇ ಖ್ಯಾತರಾದ ಬೆಟಗೇರಿ ಕೃಷ್ಣಶರ್ಮರ ಶತಮಾನೋತ್ಸವದ ಸಂದರ್ಭದಲ್ಲಿ ಶಿವಮೊಗ್ಗದ ಕರ್ನಾಟಕ ಸಂಘದ ಆಶ್ರಯದಲ್ಲಿ ಏರ್ಪಡಿಸಲಾಗಿದ್ದ 'ಆನಂದಕಂದ ನೂರರ ನೆನಪು' ಮತ್ತು ಸಂಘದಿಂದ ಪ್ರಕಟಿಸಲಾದ ವಾರ್ಷಿಕ ಸಾಹಿತ್ಯ ಪ್ರಶಸ್ತಿಯ ಪ್ರಧಾನ ಸಮಾರಂಭ ನಡೆಯಿತು.

ಸಾಹಿತ್ಯಕ್ಷೇತ್ರದಲ್ಲಿ ಸಾಕಷ್ಟು ಸಾಧನೆ ಮಾಡಿ ಗುರುತಿಸುವಂತಹ ಮಜಲುಗಳನ್ನು ಆನಂದಕಂದರು ಬಿಟ್ಟು ಹೋಗಿದ್ದಾರೆ. ಇವರು ಸಣ್ಣ ಕಥೆಯ ಮೂಲಕ ಆನಂದಕಂದರು ಕನ್ನಡ ಸಾಹಿತ್ಯ ಪರಂಪರೆಯನ್ನು ಕಟ್ಟಿಕೊಟ್ಟವರು. ಮೂಲದೇಶೀಯ ಸಂವೇದನೆಯಿಂದ ಕನ್ನಡ ಸಂಸ್ಕೃತಿಯನ್ನು ಬೆಳಸಿದರು. ಸಾಮಾಜಿಕ ನ್ಯಾಯದ ಪರಿಕಲ್ಪನೆ, ಭೂ ಒಡೆತನದ ಪರಿಕಲ್ಪನೆಯನ್ನು ಬಹುಹಿಂದೆಯೇ ಇವರು ತಮ್ಮ ಸಾಹಿತ್ಯದಲ್ಲಿ ಗುರುತಿಸಿದ್ದರು.

ಪ್ರಶಸ್ತಿ ವಿಜೇತರಾದ ಡಿ.ಎಸ್. ರಾಮಾಸ್ವಾಮಿ (ಡಾ|| ಜಿ.ಎಸ್. ಶಿವರುದ್ರಪ್ಪ ಪ್ರಶಸ್ತಿ), ಸತ್ಯಮೂರ್ತಿ ಆನಂದೂರು (ಡಾ|| ಹಾ.ಮಾ. ನಾಯಕ ಪ್ರಶಸ್ತಿ), ಅಬ್ಬಾಸ್ ಮೇಲಿನ ಮನೆ (ಪಿ. ಲಂಕೇಶ್ ಪ್ರಶಸ್ತಿ), ಡಾ|| ಕೃಷ್ಣಮೂರ್ತಿ ಹನೂರ (ಡಾ|| ಯು.ಆರ್. ಅನಂತಮೂರ್ತಿ

ಪ್ರಶಸ್ತಿ), ಜಾನಕಿ ಸುಂದರೇಶ್ (ಎಂ.ಕೆ. ಇಂದಿರಾ ಪ್ರಶಸ್ತಿ), ಚಿ. ಶ್ರೀನಿವಾಸರಾಜು (ಕೆ.ವಿ. ಸುಬ್ಬಣ್ಣ ಪ್ರಶಸ್ತಿ) ಉಪಸ್ಥಿತರಿದ್ದು, ಸನ್ಮಾನ ಸ್ವೀಕರಿಸಿದರು.

## 4. ರಾಷ್ಟ್ರಕವಿ ಕುವೆಂಪು

29-11-1904 ರಂದು ಕುಪ್ಪಳ್ಳಿಯಲ್ಲಿ ಜನಿಸಿದ ಕೆ.ವಿ. ಪುಟ್ಟಪ್ಪ ಆಧುನಿಕ ಸಾಹಿತ್ಯ ಕ್ಷೇತ್ರದಲ್ಲಿ ರೈತ ಕುಟುಂಬದಲ್ಲಿ ಕಾಣಿಸಿಕೊಂಡ ಮೊದಲ ಲೇಖಕರಾಗಿದ್ದಾರೆ. ಮನೆತನದ ವಾತಾವರಣದಿಂದಲೇ ಸಾಹಿತ್ಯದ ಬಗ್ಗೆ ಆಸಕ್ತಿ ಮೂಡಿಸಿಕೊಂಡು ಶಾಲೆಯ ಪರಿಸರದಲ್ಲಿ ಪ್ರತಿರೋಧದ ನಡುವೆಯೂ ಸಂಸ್ಕೃತ ಅಭ್ಯಾಸ ಮಾಡಿ ವಿದ್ಯಾರ್ಥಿ ದೆಸೆಯಲ್ಲೇ ಕವಿತಾ ರಚನೆಯಲ್ಲಿ ತೊಡಗಿ ಕಾಲೇಜ ಹಂತದಲ್ಲಿ ರಾಮಕೃಷ್ಣಾಶ್ರಮದ ಸಂಪರ್ಕ ಮತ್ತು ಬಿ.ಎಂ.ಶ್ರೀ, ತೀ.ನಂ.ಶ್ರೀ, ಟಿ.ಎಸ್. ವೆಂಕಟೇಶಯ್ಯ, ಎ.ಆರ್. ಕೃಷ್ಣಶಾಸ್ತ್ರೀಗಳಂತಹ ಶ್ರೇಷ್ಠ ವಿದ್ವಾಂಸರ ಮತ್ತು ಗುರುಗಳ ಸಹವಾಸದಲ್ಲಿ ಬೆಳೆದ ಕುವೆಂಪು ಕನ್ನಡ ಸಾಹಿತ್ಯದಲ್ಲಿ ಗಣನೀಯವಾಗಿ ಬೆಳೆದು ಗುರುತಿಸ್ಪಟ್ಟರು. ಗುರುಗಳ, ಸ್ನೇಹಿತರ, ಬಂಧುಗಳ, ಜನತೆಯ ಉತ್ತೇಜನ ಮತ್ತು ಪ್ರೋತ್ಸಾಹದಿಂದ 'ರಾಮಾಯಣ ದರ್ಶನಂ' ನಂತರ ಆಧುನಿಕ ಮಹಾಕಾವ್ಯ ನೀಡುವ ಮಹಾಕವಿಯಾಗಿ ರೂಪಗೊಂಡರು.

ಅವರ ಈ ಮಹತ್ಸಾಧನೆಗೆ ದ್ಯೋತಕವಾಗಿ ಪ್ರಶಸ್ತಿಗಳು ಹುಡುಕಿಕೊಂಡು ಬಂದವು. ಯಾವುದೇ ಹೊಸ ಪ್ರಶಸ್ತಿ ಸ್ಥಾಪನೆಯಾದರೂ ಅದರ ಮೊದಲಿಗರು ಕುವೆಂಪು ಆಗುವಷ್ಟು ಪ್ರಾಧಾನ್ಯತೆ ಪಡೆದ ಕುವೆಂಪು ಸಾಹಿತ್ಯ - ಸಾಧನೆ ಕನ್ನಡದಲ್ಲಿ ದಾಖಲೆಯಾಗುವಂತಹುದು.

ಕನ್ನಡದ ಸೊಗಡನ್ನು ತಂದುಕೊಟ್ಟ ಕುವೆಂಪು ಕಥೆ, ಕವನ, ಕಾವ್ಯ, ಪ್ರಬಂಧ, ಕಾದಂಬರಿ, ವಿಮರ್ಶೆ, ನಾಟಕ, ವ್ಯಕ್ತಿ ಚಿತ್ರ, ಮಹಾಕಾವ್ಯದವರೆಗೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಗಣನೀಯ ಮತ್ತು ಗಮನಾರ್ಹ ಕೃತಿ ಮಾಡಿದ್ದಾರೆ. ಎಲ್ಲ ಕ್ಷೇತ್ರಗಳಲ್ಲೂ ಕುವೆಂಪು ಸಾಹಿತ್ಯ ಅಧ್ಯಯನಕ್ಕೆ ಒಳಗಾಗುವಂತಹ ಗಟ್ಟಿತನವನ್ನು ಪಡೆದಿದೆ.

ಶೈಕ್ಷಣಿಕ ಕ್ಷೇತ್ರದಲ್ಲೂ ಕುವೆಂಪು ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿ ನಿವೃತ್ತರಾಗುವ ಮೂಲಕ ಉನ್ನತ ಸ್ಥಾನವನ್ನು ಅಲಂಕರಿಸುವ ಮಟ್ಟಕ್ಕೇರಲು ಅವರ ಈ ವಿಶಿಷ್ಟ ಸಾಹಿತ್ಯ ಪ್ರತಿಭೆ ಬೆಂಬಲವಾಗುವಷ್ಟು ಪ್ರಧಾನವಾಗಿದೆ.

ನಾಡು-ನುಡಿ-ಜನತೆಯನ್ನು ಕುರಿತ ಅವರ ವಿಚಾರ ಸಾಹಿತ್ಯ ಅತ್ಯಂತ ಉನ್ನತ ಚಿಂತನೆಯಿಂದ ಕೂಡಿದ್ದು ಯಾವತ್ತಿಗೂ ತನ್ನ ಮೌಲ್ಯವನ್ನು ಉಳಿಸಿಕೊಳ್ಳುವಂತಹ ಶ್ರೇಷ್ಠಮಟ್ಟದ್ದಾಗಿದೆ. ಋಷಿಜೀವನವನ್ನು ನಡೆಸಿದ ಕುವೆಂಪು ಅವರ ವ್ಯಕ್ತಿತ್ವವೂ ವಿಶಿಷ್ಟವಾದುದಾಗಿದೆ. ಕನ್ನಡ ಜನತೆ 'ರಸಋಷಿ' ಎಂದೇ ಗೌರವಿಸಿದೆ.

ಕನ್ನಡ ಸಾಹಿತ್ಯದಲ್ಲೇ ವಿಶಿಷ್ಟವಾದ ವಿಭಿನ್ನವಾದ ಕುವೆಂಪು ಅವರ ಶತಮಾನೋತ್ಸವವನ್ನು ಅಷ್ಟೇ ವಿಶಿಷ್ಟವಾಗಿ ಆಚರಿಸಲು ನಾಡು ಮುಂದಾಗಿದೆ. ಸರ್ಕಾರವೇ ಕೋಟಿಗಳ ಲೆಕ್ಕದಲ್ಲಿ ಯೋಜನೆಗಳನ್ನು ರೂಪಿಸಿದೆ. ಇಡೀ ವರ್ಷ ನಡೆಯುವ ಈ ಅದ್ದೂರಿ ಶತಮಾನೋತ್ಸವ ಕೇವಲ ಒಬ್ಬ ಕವಿಯ ಸ್ಮರಣೆಯಾಗಷ್ಟೇ ಆಗದೆ ಕನ್ನಡ ಸಂಸ್ಕೃತಿಯ ಚಟುವಟಿಕೆಯಾಗಲಿದೆ. ಕುವೆಂಪು ಶತಮಾನೋತ್ಸವ ನಾಡಿನ ಸಾಂಸ್ಕೃತಿಕ ಉತ್ಸವವಾಗಿ ರೂಪಗೊಳ್ಳಲಿದೆ. 29-11-200[illegible] ರಂದು ಕುಪ್ಪಳಿಯಿಂದ ತಂದ ಕುವೆಂಪು ಜ್ಯೋತಿಯಿಂದ ಅಧಿಕೃತವಾಗಿ ಉತ್ಸವವನ್ನು ಸರ್ಕಾರ ಉದ್ಘಾಟನೆ ಮಾಡಿದೆ.

**5. ಡಾ|| ಶ್ರೀರಂಗ :** ಆರ್.ವಿ. ಜಾಗೀರ್‌ದಾರ್ ಆಗಿ 26-9-1904ರಲ್ಲಿ ಬಿಜಾಪುರ ಜಿಲ್ಲೆ ಅಗರಖೇಡದಲ್ಲಿ ವಾಸುದೇವಾಚಾರ್ಯ ಮತ್ತು ರಮಾಬಾಯಿ ಅವರಿಗೆ ಜನಿಸಿದ ಶ್ರೀರಂಗರು ಕನ್ನಡದ ರಂಗಭೂಮಿ ಮತ್ತು ನಾಟಕ ಕ್ಷೇತ್ರದ ಭೀಷ್ಮರೆನಿಸಿದವರು. ಕನ್ನಡ ಜನತೆ ಇವರನ್ನು ಕರ್ನಾಟಕದ ಬರ್ನಾರ್ಡ್ ಷಾ ಎಂದೇ ಕರೆಯುತ್ತಾರೆ. ಬಹುಮುಖ ಪ್ರತಿಭೆಯ ಸಾಹಿತ್ಯ ಕೃಷಿ ಇವರದ್ದು. ವಿಶೇಷವಾಗಿ ನಾಟಕಗಳಲ್ಲಿ ಜನಪ್ರಿಯರಾಗಿದ್ದಾರೆ. 50ಕ್ಕೂ ಹೆಚ್ಚು ನಾಟಕಗಳನ್ನು ರಚಿಸಿ, ಅಭಿನಯಿಸಿ, ನಿರ್ದೇಶಿಸಿ, ಮಾರ್ಗದರ್ಶನ ನೀಡಿ, ರಂಗಮಂದಿರಗಳನ್ನು ಸ್ಥಾಪಿಸಿ, ರಂಗತಂಡಗಳನ್ನು ಕಟ್ಟಿ, ವಿಮರ್ಶೆಗಳನ್ನು ಬರೆದು ಕನ್ನಡ ನಾಟಕ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಕಾದಂಬರಿಗಳು, ಜೀವನ ಚರಿತ್ರೆ, ವಿಮರ್ಶೆ ಮುಂತಾದವುಗಳನ್ನು ರಚಿಸಿದ್ದಾರೆ. ಪದ್ಮಭೂಷಣ, ಕೇಂದ್ರ- ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು, ಅಖಿಲಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಮುಂತಾದ ಹಲವು ಗಣ್ಯ ಗೌರವಗಳಿಗೆ ಪಾತ್ರರಾಗಿದ್ದಾರೆ.

ಡಾ|| ಶ್ರೀರಂಗರ ಶತಮಾನೋತ್ಸವವನ್ನು ಸರ್ಕಾರ ಮತ್ತು ಸಂಘ ಸಂಸ್ಥೆಗಳು ಸೂಕ್ತ ರೀತಿಯಲ್ಲಿ ಆಚರಿಸಲು ಹಲವು ಯೋಜನೆಗಳನ್ನು ಹಮ್ಮಿಕೊಂಡಿವೆ.

**6. ಡಾ|| ಎನ್. ಅನಂತರಂಗಾಚಾರ್ :** ಕನ್ನಡ ಎಂ.ಎ. ಪ್ರಥಮ ತಂಡದ ವಿದ್ಯಾರ್ಥಿಗಳಾಗಿ, ರಾಷ್ಟ್ರಕವಿ ಕುವೆಂಪು ಅವರ ಸಹಪಾಠಿಗಳಾಗಿದ್ದ ಡಾ|| ಎನ್. ಅನಂತರಂಗಾಚಾರ್ ಅವರು ಬಿ.ಎಂ.ಶ್ರೀ. ಗರಡಿಯಲ್ಲಿ ಪಳಗಿದ್ದ ಶ್ರೇಷ್ಠ ಮಟ್ಟದ ವಿದ್ವಾಂಸರಾಗಿದ್ದರು. ವಿಶೇಷವಾಗಿ ಗ್ರಂಥಸಂಪಾದನ ಕ್ಷೇತ್ರದಲ್ಲಿ ಇವರ ಹೆಸರು ಗಣ್ಯವಾಗಿದೆ. ಕಾವ್ಯಸಾರ, ಸೂಕ್ತಿಸುಧಾರ್ಣವ, ಕಾದಂಬರಿ ಸಂಗ್ರಹಗಳಂತಹ ಪ್ರಮುಖ ಪ್ರಾಚೀನ ಕೃತಿಗಳನ್ನು ಸಂಪಾದಿಸಿರುವುದಲ್ಲದೆ ಕನ್ನಡ ಚಂಪೂ ಕಾವ್ಯಗಳ ಪದ್ಯಾನುಕ್ರಮಣಿಕೆ ಎಂಬ ಅತ್ಯುತ್ತಮ ಆಕರ ಗ್ರಂಥವನ್ನು ಕನ್ನಡಕ್ಕೆ ಕೊಟ್ಟಿದ್ದಾರೆ.

ಡಾ|| ಅನಂತರಂಗಾಚಾರ್ ಅವರು ತಮ್ಮ ಸಂಗ್ರಹದಲ್ಲಿದ್ದ ಸೂಕ್ತಿಸುಧಾರ್ಣವ ಹಸ್ತಪ್ರತಿ ಮತ್ತು ಅನೇಕ ಮೌಲಿಕ ಗ್ರಂಥಗಳು ಹಾಗೂ ಪತ್ರಿಕೆಗಳನ್ನು ಅವರಿದ್ದಾಗಲೇ ಪ್ರತಿಷ್ಠಾನಕ್ಕೆ ದಾನವಾಗಿ ನೀಡಿದ್ದರು. ಸಂಸ್ಥಾಪಕರೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡು ಸಂಸ್ಥೆಯ ಹಿತೈಷಿಗಳಾಗಿದ್ದರು.

ಇಂತಹ ಶ್ರೇಷ್ಠ ವಿದ್ವಾಂಸರ ಶತಮಾನೋತ್ಸವಾಚರಣೆಗೆ ಸಿದ್ಧತೆಗಳು ನಡೆಯುತ್ತಿದ್ದು ಒಂದು ಮೌಲಿಕ ಗ್ರಂಥದ ಪ್ರಕಟಣೆಯನ್ನು ಶತಮಾನೋತ್ಸವ ಸಮಿತಿ ಹೊರತರಲು ಉದ್ದೇಶಿಸಿದೆ.

**7. ಡಾ|| ಎಲ್. ಗುಂಡಪ್ಪ. :** ಕನ್ನಡ ವಿದ್ವತ್ ಕ್ಷೇತ್ರದಲ್ಲಿ ಡಾ|| ಎಲ್. ಗುಂಡಪ್ಪನವರ ಹೆಸರು ಶಾಶ್ವತವಾದದ್ದು. ಕನ್ನಡಕ್ಕೆ ತಿರುಕ್ಕುರುಳ್ ಗ್ರಂಥವನ್ನು ಅನುವಾದ ಮಾಡಿಕೊಟ್ಟ ಶ್ರೇಷ್ಠ ವಿದ್ವಾಂಸರು. ಅನೇಕ ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿರುವುದಲ್ಲದೆ ಅನುವಾದಗಳನ್ನು ಮಾಡಿದ್ದಾರೆ. ಕುಮಾರವ್ಯಾಸ ಭಾರತದ ಅನುವಾದ ಇಂದಿಗೂ ಜನಪ್ರಿಯವಾಗಿ ಇದೆ. ಕೆಲವು ಇಂಗ್ಲಿಷ್ ಕೃತಿಗಳನ್ನೂ ಕನ್ನಡಕ್ಕೆ ಅನುವಾದಿಸಿದ್ದಾರೆ. ಟಾಲ್‌ಸ್ಟಾಯ್ ಕಥೆಗಳು ಅಂತಹ ಒಂದು ಜನಪ್ರಿಯ ಅನುವಾದ. ಬಿ.ಎಂ.ಶ್ರೀ.ಯವರ ಶಿಷ್ಯ ಪರಂಪರೆಯಲ್ಲಿ ಬೆಳೆದು ಬಂದ ಶ್ರೇಷ್ಠ ವಿದ್ವಾಂಸರಾದ ಡಾ|| ಎಲ್. ಗುಂಡಪ್ಪನವರ ಶತಮಾನೋತ್ಸವ ವರ್ಷ ಇದಾಗಿದ್ದು ಕನ್ನಡ ಜನತೆ ಸೂಕ್ತರೀತಿಯಲ್ಲಿ ಆಚರಿಸಬೇಕಾಗಿದೆ.

ಬಿ.ಎಂ.ಶ್ರೀ ಪ್ರತಿಷ್ಠಾನದ ನಿಕಟವರ್ತಿಗಳಾಗಿದ್ದ ಗುಂಡಪ್ಪನವರು ಸಂಸ್ಥಾಪಕ ಸೀತಾರಾಮಯ್ಯನವರು ಗೋವಿಂದರಾಜು ಅವರೊಂದಿಗೆ ಅನವಾದಿಸುತ್ತಿದ್ದ ತಿರುಕ್ಕುರುಳ್ ಗ್ರಂಥದ ಬಗ್ಗೆ ಆಗಾಗ್ಗೆ ಚರ್ಚಿಸುತ್ತಿದ್ದರು. ಆ ಗ್ರಂಥ ಇವರೆಗೂ ಅಪೂರ್ಣವಾಗಿದ್ದು ಗುಂಡಪ್ಪನವರ ಶತಮಾನೋತ್ಸವ ವರ್ಷದಲ್ಲಿ ಪ್ರಕಟಿಸಲಾಗುವುದು.

# ಅಭಿನಂದನೆ

**೧. ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗಳು :**

೨೦೦೨ನೇ ಸಾಲಿನ ಗೌರವ ಪ್ರಶಸ್ತಿಯನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ ಈ ಕೆಳಕಂಡವರಿಗೆ ನೀಡಿ ಗೌರವಿಸಿದೆ. ಪ್ರಬಂಧಕಾರ ರಾಮಚಂದ್ರ ಕುಲಕರ್ಣಿ (ರಾಕು), ಜಾನಪದ ವಿದ್ವಾಂಸ ಮುದೇನೂರು ಸಂಗಣ್ಣ, ಖ್ಯಾತ ಕಾದಂಬರಿಕಾರ ಶ್ರೀ ಕೆ.ಟಿ. ಗಟ್ಟಿ, ಕಾದಂಬರಿಗಾರ್ತಿ ಶ್ರೀಮತಿ ಸುನಂದಾ ಬೆಳಗಾಂವಕರ್, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಪ್ರಾಧ್ಯಾಪಕ ಡಾ॥ ಅರವಿಂದ ಮಾಲಗತ್ತಿ.

**೨. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು :**

ಖ್ಯಾತ ವಿಮರ್ಶಕ, ಹೆಸರಾಂತ ನಾಟಕಕಾರ ಡಾ॥ ಕೆ.ವಿ. ಸುಬ್ಬಣ್ಣ ಅವರ 'ಕವಿರಾಜ ಮಾರ್ಗ ಮತ್ತು ಕನ್ನಡ ಜಗತ್ತು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ. ಡಾ॥ ವೀಣಾ ಶಾಂತೇಶ್ವರ ಅವರು ಅನುವಾದಿಸಿರುವ 'ನವದ್ವೀಪಗಳು' (ಆಜ್ಞೇಯ ಮೂಲಕೃತಿ) ಕೃತಿಗೆ ೨೦೦೨ನೇ ಸಾಲಿನ 'ಭಾಷಾಂತರ ಪ್ರಶಸ್ತಿ' ಲಭಿಸಿದೆ.

**೩. ಕರ್ನಾಟಕ ಸರ್ಕಾರ ನೀಡುವ ಪುರಸ್ಕಾರಗಳು:**

**'ಬಸವಶ್ರೀ' (೨೦೦೨) ಪ್ರಶಸ್ತಿ :** ಡಾ॥ ಚಂದ್ರಶೇಖರ ಕಂಬಾರ, **'ಸಾಹಿತ್ಯಶ್ರೀ' ಪ್ರಶಸ್ತಿ :** ಶ್ರೀಮತಿ ಶೈಲಜಾ ಉಡಚಣ, **'ಅಂಬೇಡ್ಕರ್ ಪ್ರಶಸ್ತಿ' (೨೦೦೩-೦೪) :** ಶ್ರೀ ದೇವನೂರು ಮಹದೇವ, **'ಶ್ರೀ ಕನಕಪುರಂದರ ಪ್ರಶಸ್ತಿ' :** ಪಂಡಿತ ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ, **'ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ' :** ಶ್ರೀ ಜೆ.ಎಸ್. ಖಂಡೇರಾವ್, **'ಜಾನಪದಶ್ರೀ':** ಶ್ರೀ ಎಂ.ಆರ್. ಬಸಪ್ಪ, **'ಜಕಣಾಚಾರಿ ಪ್ರಶಸ್ತಿ' :** ಶ್ರೀ ಎನ್.ಕೆ. ಮೃತ್ಯುಂಜಯಾಚಾರ್ಯ **'ಡಾ॥ ಗುಬ್ಬಿ ವೀರಣ್ಣ ಪ್ರಶಸ್ತಿ' :** ಪದ್ಮಶ್ರೀ ಚಿಂದೋಡಿಲೀಲಾ, **'ಸಂತ ಶಿಶುನಾಳ ಪ್ರಶಸ್ತಿ':** ಶ್ರೀ ಗರ್ತಿಕೆರೆ ರಾಘಣ್ಣ, **'ಶಾಂತಲಾ ನಾಟ್ಯ ಪ್ರಶಸ್ತಿ' :** ಪದ್ಮಶ್ರೀ ಶಾಂತಾರಾವ್, **'ದಾನಚಿಂತಾಮಣಿ ಪ್ರಶಸ್ತಿ' :** ಶ್ರೀಮತಿ ಗೀತಾ ನಾಗಭೂಷಣ, ಇವರುಗಳಿಗೆ ಸಂದಿವೆ.

**೪. ಇತರೆ ಪ್ರಶಸ್ತಿ ಪುರಸ್ಕಾರಗಳು :**

**'ಅ.ನ.ಕೃ. ನಿರ್ಮಾಣ ಪ್ರಶಸ್ತಿ' :** ಪ್ರೊ॥ ಜಿ.ಎಸ್. ಆಮೂರ, **'ಶಾಂತಾವೇರಿ ಗೋಪಾಲಗೌಡ ಪ್ರಶಸ್ತಿ' :** ಶ್ರೀ ಕೋಣಂದೂರು ಲಿಂಗಪ್ಪ, **'ಮಾಸ್ತಿ ಪ್ರಶಸ್ತಿ' :** ಪದ್ಮಶ್ರೀ ಡಾ॥ ದೇಜಗೌ, **'ಟಿಳಕ-ಮೊಹರ ಗೌರವ ಸನ್ಮಾನ ಪ್ರಶಸ್ತಿ' :** ಶ್ರೀ ಜಿ. ನಾರಾಯಣ, **'ಚಿದಾನಂದ ಪ್ರಶಸ್ತಿ' :** ಡಾ॥ ಸೂರ್ಯನಾಥ್ ಕಾಮತ್, ಇರಾನ್ ಸರ್ಕಾರದ **'ಅಕಾಡೆಮಿ ಆಫ್ ಆರ್ಟ್ ಸಂಸ್ಥೆಯ ಅಂತರರಾಷ್ಟ್ರೀಯ ಕಲಾ ಪ್ರಶಸ್ತಿ' :** ಕಲಾವಿದ ಎಂ.ಎಸ್.ಮೂರ್ತಿ (ಪ್ರಶಸ್ತಿ ಪಡೆದ ಕಲಾಕೃತಿ ದಿ ಲೈಟ್) ಡಾ॥ ಜಿಎಸ್ಸೆಸ್ ವಿಶ್ವಸ್ತ ಮಂಡಲಿ ನೀಡುವ **'ಡಾ. ಜಿಎಸ್ಸೆಸ್ ಪ್ರಶಸ್ತಿ' :** ಡಾ॥ ಕೆ.ವಿ. ನಾರಾಯಣ, ಡಾ॥ ಚನ್ನಬಸವಪಟ್ಟದೇವರು, **'ಮಕ್ಕಳ ಸಾಹಿತ್ಯ ಪ್ರಶಸ್ತಿ' (೨೦೦೨):** ಶ್ರೀಮತಿ ಬಿ.ಟಿ. ಲಲಿತಾ ನಾಯಕ್, **'ಪದ್ಮಭೂಷಣ ಬಿ. ಸರೋಜದೇವಿ ಸಾಹಿತ್ಯ ಪ್ರಶಸ್ತಿ':** ಶ್ರೀಮತಿ ಉಷಾ ಪಿ. ರೈ, **'ಸೇಡಿಯಾಪು ಪ್ರಶಸ್ತಿ' :**

ಪ್ರೊ॥ ಟಿ. ಕೇಶವಭಟ್. **'ಡಾ॥ ಶಿವರಾಮ ಕಾರಂತ ಪ್ರಶಸ್ತಿ':** ಎನ್.ಕೆ. ಕುಲಕರ್ಣಿ (ಎನ್ಕೆ), **'ಡಾ॥ ಶಿವರುದ್ರಪ್ಪ ಕಾವ್ಯ ಪ್ರಶಸ್ತಿ':** ಅರಸಿಕೆರೆಯ ಡಿ.ಎಸ್. ರಾಮಸ್ವಾಮಿ ಅವರ ಚೊಚ್ಚಲ ಕೃತಿ 'ಮರೆತ ಮಾತು'(ಕವನ ಸಂಕಲನ) **'ಸೀತಾಸುತ ಸಾಹಿತ್ಯ ಪ್ರಶಸ್ತಿ':** ಡಾ॥ ಸಾ. ಶಿ. ಮರುಳಯ್ಯ, ಶ್ರೀ ಟಿ.ವಿ. ವೆಂಕಟರಮಣಯ್ಯ ಅವರಿಗೆ ಅಭಿಮಾನಿಗಳಿಂದ 'ಸೂಕ್ತಿ ರತ್ನಾಕರ' ಬಿರುದು, **'ಚಾವುಂಡರಾಯ ಪ್ರಶಸ್ತಿ':** ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ (೨೦೦೩ನೇ ಸಾಲಿನ ಪ್ರಶಸ್ತಿಯನ್ನು ಡಿಸೆಂಬರ್ ತಿಂಗಳಲ್ಲಿ ನೀಡಲಾಗುತ್ತದೆ), **'ಗೊರೂರು ಪ್ರಶಸ್ತಿ':** ಡಾ॥ ದೇಜಗೌ (೨೦೦೩ನೇ ಸಾಲಿನ ಪ್ರಶಸ್ತಿ) ಮತ್ತು ಕನಕಪೀಠದ ಪ್ರಥಮ ಪ್ರಶಸ್ತಿ 'ಕನಕರತ್ನ' (೨೦೦೩) ಡಾ॥ ಎಚ್. ಸುದರ್ಶನ್ ಅವರಿಗೆ (೨೦೦೩-೦೪)ನೇ ಸಾಲಿನ ಡಿ. ದೇವರಾಜು ಅರಸು ಪ್ರಶಸ್ತಿ ನೀಡಲಾಗಿದೆ.

**೫. ಬೆಳಗಾವಿಯಲ್ಲಿ ನಡೆದ ೭೦ನೆ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಸನ್ಮಾನ :**

ಸನ್ಮಾನಿತರಾದ ಪ್ರಮುಖ ಸಾಹಿತಿಗಳು : ಡಾ॥ ಅ. ಸುಂದರ, ಎಸ್.ವಿ. ಶ್ರೀನಿವಾಸರಾವ್, ಮುದೇನೂರು ಸಂಗಣ್ಣ, ಶ್ರೀಮತಿ ಸಾಯಿಸುತೆ, ಶ್ರೀಮತಿ ಪ್ರೇಮಾ ಭಟ್, ಶ್ರೀಮತಿ ಎ. ಪಂಕಜ, ವಿದ್ವಾನ್ ಎನ್. ರಂಗನಾಥ ಶರ್ಮ, ಡಾ॥ ಕೆ. ಶ್ರೀನಿವಾಸಯ್ಯ, ಬನ್ನಂಜೆ ರಾಮಾಚಾರ್ಯ ಮುಂತಾದವರು. (ಇದೇ ಸಂದರ್ಭದಲ್ಲಿ ಶ್ರೀ ಎಸ್.ವಿ. ಶ್ರೀನಿವಾಸರಾವ್ ರಚಿಸಿರುವ 'ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು' ಗ್ರಂಥವನ್ನು ಡಾ॥ ಪಾಟೀಲ ಪುಟ್ಟಪ್ಪನವರು ಬಿಡುಗಡೆ ಮಾಡಿದರು.)

**೬. ೨೦೦೩ನೇ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು :**

ಪ್ರೊ॥ ಡಿ. ಲಿಂಗಯ್ಯ, ಡಾ॥ ಸೋಮಶೇಖರ ಇಮ್ರಾಪುರ್, ಡಾ॥ ಮರುಳಸಿದ್ಧಪ್ಪ, ಪ್ರೊ॥ ಬರಗೂರು ರಾಮಚಂದ್ರಪ್ಪ, ಡಾ॥ ಎನ್.ಆರ್. ನಾಯಕ್, ಡಾ॥ ಎಚ್.ಎಸ್. ವೆಂಕಟೇಶಮೂರ್ತಿ, ಡಾ॥ ಪ್ರಧಾನ ಗುರುದತ್.

**೭. ೨೦೦೩ನೇ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ :**

ಈ ಪ್ರಶಸ್ತಿಗೆ ಭಾಜನರಾಗಿರುವ ಶ್ರೀಯುತರುಗಳಾದ ಕೆ.ವಿ. ಸುಬ್ಬಣ್ಣ, ಡಾ॥ ವಸಂತ, ಎ. ದಿವಾಣಜಿ, ಜಂಬಣ್ಣ, ಶ್ರೀಮತಿ ಮಲ್ಲಿಕಾ, ಡಾ॥ ಸರಜೂಕಾಟ್ಕರ್ ಹಾಗೂ ಉತ್ತಮ ಕೃತಿಗಳಿಗಾಗಿ ಬಹುಮಾನ ಗಳಿಸಿರುವ ಸನ್ಮಾನ್ಯರುಗಳಾದ ಲಲಿತಾ ಸಿದ್ಧಬಸವಯ್ಯ, ಬಾಳಾ ಸಾಹೇಬಲೋಕಾಪುರ, ಬಸವರಾಜ ಸಾದರ, ರಾ.ಕ. ನಾಯಕ್, ಕೃಷ್ಣಮೂರ್ತಿ ಕಿತ್ತೂರ, ವಸಂತರಾಜ್ ಎನ್.ಕೆ., ಸಿ.ಜಿ. ಕೃಷ್ಣಮೂರ್ತಿ, ಡಾ॥ ಆರ್.ವಿ. ಭಂಡಾರಿ, ಡಾ॥ ಸಿ.ಆರ್. ಚಂದ್ರಶೇಖರ್, ಮ. ಮಹೇಶನ್, ದೇವರ ಕೊಂಡಾರೆಡ್ಡಿ, ಡಿ.ವಿ. ಶಂಕರ್, ಚಂದ್ರಕಾಂತ ಪೋಕಳೆ, ಡಾ॥ ನಟರಾಜ ಹುಳಿಯಾರ್, ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ್, ಡಾ॥ ವಿನಯ, ಪದ್ಮ ರಾಮಚಂದ್ರ ಶರ್ಮ.

**೮. ವಿಶ್ವೇಶ್ವರಯ್ಯ ಪ್ರಶಸ್ತಿ (೨೦೦೨):**

೧೬ ಜನರಿಗೆ ವಿಶ್ವೇಶ್ವರಯ್ಯ ನವರತ್ನ ಪ್ರಶಸ್ತಿ, ಮತ್ತೆ ೧೬ ಜನರಿಗೆ ವಿಶ್ವೇಶ್ವರಯ್ಯ ಪ್ರಶಸ್ತಿಯನ್ನು ನೀಡಲಾಗಿದೆ. **ಪ್ರಶಸ್ತಿ ಪುರಸ್ಕೃತರು :** ಶ್ರೀಮತಿ ಟಿ. ಸುನಂದಮ್ಮ ಶ್ರೀ ರಾಮದಾಸ,

ಡಾ॥ ವೀರಣ್ಣ ರಾಜೂರು, ಡಾ॥ ಚನ್ನಣ್ಣ ವಾಲಿಕಾರ, ಕೆ. ಚಂದ್ರಮೌಳಿ, ಡಾ॥ ಎಚ್. ಚಂದ್ರಶೇಖರ್, ಪ್ರೊ॥ ವೈ. ವೃಷಭೇಂದ್ರಪ್ಪ, ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ, ಶಾಂತಾರಾಮ ಆಚಾರ್ಯ, ಶ್ರೀ ದೇವರಾಜ ಶೆಟ್ಟಿ, ಡಾ॥ ಕೆ. ಜನಾರ್ಧನಂ, ಮೋಹನ್ ಮಂಘ್ನಾನಿ, ಎಂ.ಸಿ. ರಮೇಶ್, ಶ್ರೀನಿವಾಸ ಕುಲಕರ್ಣಿ, ಶ್ರೀ ಎ.ಟಿ. ಪಾಟೀಲ್, ಶ್ರೀ ತಿಲಕನಾಥ ಮಂಜೇಶ್ವರ, ಶ್ರೀ ವೀರಪ್ಪ ಗೋರಂಟ್ಲಿ, ಶ್ರೀ ಬಸವರಾಜಸ್ವಾಮಿ, ಶ್ರೀ ಆಂಜನಪ್ಪ, ಶ್ರೀ ಶೇಖ್ ಇಮ್ತಿಯಾಜ್, ಶ್ರೀ ತಮ್ಮಣ್ಣ ಪಾರ್ಶಿ, ಶ್ರೀ ಕಾಳಪ್ಪ, ಶ್ರೀ ಡಿ.ಎಸ್. ವೀರಪ್ಪ, ಶ್ರೀ ಕೆ. ಸೋಮನಾಥ ಆಚಾರ್ಯ, ಶ್ರೀ ನಾಗತಿಹಳ್ಳಿ ಚಂದ್ರಶೇಖರ್, ಶ್ರೀ ಶಹಜಾನ್ ಡೊಂಗಾಗಾಂವ್, ಶ್ರೀ ಎಸ್. ಪ್ರಭಾಕರ್, ಶ್ರೀ ಸಿದ್ದು ಎ. ಸೂರ್ಯವಂಶಿ, ಎಸ್ ಅನಂತ, ಡಾ॥ ಬಿ.ಟಿ. ಪುಟ್ಟಿ.

ಈ ಎಲ್ಲಾ ಮಾನ್ಯರಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನ ಕರ್ನಾಟಕಲೋಚನದ ಮೂಲಕ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

# ಶ್ರದ್ಧಾಂಜಲಿ



**ವಿದ್ವಾನ್ ಜಿ.ವಿ. ಶಿವಸ್ವಾಮಿ**

ಕನ್ನಡ ಸಾಹಿತಿ, ಕಾರ್ಯಕರ್ತ, ವಿದ್ವಾನ್ ಜಿ.ವಿ. ಶಿವಸ್ವಾಮಿ ಅವರು ೧೯-೫-೨೦೦೩ ರಂದು ನಿಧನರಾದರು. ರಾಮನಗರ ತಾಲ್ಲೂಕಿನ ದೊಡ್ಡಗಂಗವಾಡಿಯಲ್ಲಿ ಜನಿಸಿದ ಶಿವಸ್ವಾಮಿ ಅವರು ಕನ್ನಡ, ಹಿಂದಿ ಹಾಗೂ ಸಂಸ್ಕೃತದಲ್ಲಿ ವಿದ್ವಾಂಸರಾಗಿದ್ದರು. ಅವರು ಮೈಸೂರು ವಿಶ್ವವಿದ್ಯಾಲಯದಿಂದ ಸಂಸ್ಕೃತ ಸ್ನಾತಕೋಸ್ಕರ ಪದವಿಯನ್ನು ಸುವರ್ಣಪದಕದೊಂದಿಗೆ ಪಡೆದಿದ್ದರು. ಬೆಂಗಳೂರು ಮಹಾನಗರ ಪಾಲಿಕೆಯ ಪದವಿ ಪೂರ್ವ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ಕಾರ್ಯನಿರ್ವಹಿಸಿದ್ದರು.

ಶರಣ ಸಾಹಿತ್ಯ ಪರಿಷತ್ತಿನ ಬೆಂಗಳೂರು ಘಟಕದ ಅಧ್ಯಕ್ಷರಾಗಿ, ವಿಶ್ವ ವೀರಶೈವ ಪರಿಷತ್ ಬೆಂಗಳೂರು ಘಟಕದ ಅಧ್ಯಕ್ಷರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ ನಗರ ಘಟಕದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದ ಅವರು ಸುಮಾರು ೨೦ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. ೨೦೦೧ರಲ್ಲಿ ಅವರಿಗೆ ಪಾಲಿಕೆಯಿಂದ ಕೆಂಪೇಗೌಡ ಪ್ರಶಸ್ತಿ ನೀಡಿ ಗೌರವಿಸಲಾಗಿದೆ. ರಾಮನಗರ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನದ ಸಮ್ಮೇಳನಾಧ್ಯಕ್ಷರಾಗಿದ್ದರು. ಬಿ.ಎಂ.ಶ್ರೀ. ಪ್ರತಿಷ್ಠಾನದ ಸದಸ್ಯರಾಗಿ, ಹಿತೈಷಿಗಳಾಗಿ ಸಕ್ರಿಯ ಸಂಬಂಧವನ್ನಿಟ್ಟುಕೊಂಡಿದ್ದರು.

**ಇ.ಆರ್. ಸೇತುರಾಂ**

ಖ್ಯಾತ ಹಿರಿಯ ಪತ್ರಕರ್ತ, ಸಂಗೀತಜ್ಞ, ನುರಿತ ಪ್ರಬಂಧಕಾರ ಹಾಗೂ ಹಾಸ್ಯ ವಿಡಂಬನ ಸಾಹಿತ್ಯ ರಚನಾಕಾರನಾಗಿದ್ದ ಶ್ರೀ ಇ.ಆರ್. ಸೇತೂರಾಂ ರವರು ದಿನಾಂಕ ೩-೧-೨೦೦೩ (ವಯಸ್ಸು ೮೩) ನಿಧನರಾದರು.

ಬಹುಮುಖಿ ಪ್ರತಿಭೆಯ ಖ್ಯಾತ ಲೇಖಕ, ಹಾಸ್ಯ ವಿಡಂಬನ ಸಾಹಿತ್ಯ ಕ್ಷೇತ್ರದ ಪ್ರಮುಖ ಲೇಖಕರಾಗಿದ್ದ **ಶ್ರೀ ಸಾ.ಕೃ. ಪ್ರಕಾಶ್**ರವರು (ವಯಸ್ಸು ೫೭) ದಿನಾಂಕ ೨೩-೧-೨೦೦೩ ರಂದು ಅಕಾಲ ಮರಣಕ್ಕೆ ತುತ್ತಾದರು.

**ಕುರ್ತಕೋಟಿ ದಂಪತಿಗಳು**

ಕನ್ನಡ ಸಾಹಿತ್ಯದ ಖ್ಯಾತ ವಿಮರ್ಶಕರಾದ ಪ್ರೊ|| ಕೀರ್ತಿನಾಥ ಕುರ್ತಕೋಟಿ (೭೫) ಹಾಗೂ ಅವರ ಧರ್ಮಪತ್ನಿ ಸರಸ್ವತಿ ಕುರ್ತಕೋಟಿ (೭೩) ದಿನಾಂಕ ೩೦-೭-೨೦೦೩ ರಂದು ಇಬ್ಬರೂ ಕೆಲವೇ ಗಂಟೆಗಳ ಅಂತರದಲ್ಲಿ ನಿಧನರಾದರು. ಪ್ರೊ|| ಕೀರ್ತಿನಾಥ ಕುರ್ತಕೋಟಿಯವರ ಜೀವಿತಕಾಲ (೧೨-೧೦- ೧೯೨೮ ರಿಂದ ೩೦-೭-೨೦೦೩)

ಶ್ರೀಯುತರು ಕನ್ನಡದ ಖ್ಯಾತ ವಿಮರ್ಶಕರಾಗಿದ್ದುದಲ್ಲದೆ ಪ್ರಖ್ಯಾತ ನಾಟಕಕಾರರೂ, ನುರಿತ ಶಿಕ್ಷಕರು ಹಾಗೂ ವೈಶಿಷ್ಟ್ಯಪೂರ್ಣ ಪತ್ರಿಕಾಕರ್ತರು (ಸಂಪಾದಕರು - ಮನ್ವಂತರ) ಆಗಿದ್ದರು. ಇಂಗ್ಲಿಷಿನಲ್ಲೂ ಸತ್ವಪೂರ್ಣ ಲೇಖಕರಾಗಿದ್ದು ಉತ್ತಮ ಕೃತಿಗಳನ್ನು ರಚಿಸಿರುತ್ತಾರೆ. ಕನ್ನಡ ಸಂಸ್ಕೃತ ಭಾಷೆಗಳ ವಿದ್ವಾಂಸರಾಗಿದ್ದರು. ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕೃತರು (೧೯೯೫) ಉರಿಯ ನಾಲಿಗೆ (ವಿಮರ್ಶೆ) ೧೯೯೩, ಮರಾಠಿ ಸಂಸ್ಕೃತಿ ಕೆಲವು ಸಮಸ್ಯೆಗಳು (ಭಾಷಾಂತರ), ಆಮನಿ (ನಾಟಕ), ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ನವ್ಯಕಾವ್ಯ

ಪ್ರಯೋಗ, ನಡೆದುಬಂದ ದಾರಿ (ವಿಮರ್ಶೆಗಳು) ಸ್ವಪ್ನದರ್ಶಿ ಮತ್ತು ಇತರೆ ನಾಟಕಗಳು, ವಾಸುದೇವ ಪ್ರಶಸ್ತಿ (ಸಂಪಾದನೆ), ಯಶೋಧರ ಚರಿತ್ರೆಯ ಕಾವ್ಯ ತಂತ್ರ ಮುಂತಾದವು ಅವರ ಪ್ರಮುಖ ಕೃತಿಗಳು.

ಕರ್ನಾಟಕ ರಾಜ್ಯ ಸಾಹಿತ್ಯ ಇಲಾಖೆಯು ಇವರ ಪ್ರತಿಭೆಯನ್ನು ಗುರುತಿಸಿ ೧೯೭೧ರಲ್ಲಿ ಗೌರವ ಪ್ರಶಸ್ತಿ ನೀಡಿದೆ. ಮನೋಹರ ಗ್ರಂಥಮಾಲೆಯ ಪ್ರಮುಖ ಸಲಹೆಗಾರರಾಗಿದ್ದ ಗೌರವ ಇವರದು.

**ಡಾ. ಎ.ಎನ್. ಮೂರ್ತಿರಾವ್**

ಕನ್ನಡ ಸಾಹಿತ್ಯ ಲೋಕದ ಹಿರಿಯಣ್ಣ, ಶತಾಯುಷಿ, ಎ.ಎನ್.ಮೂರ್ತಿರಾವ್ (೧೦೩) ಮರೆಯಲಾಗದ, ಸಾಹಿತ್ಯಲೋಕದ ಅಪರೂಪದ ಪ್ರಬಂಧಕಾರ, ಪ್ರಬುದ್ಧ ಚಿಂತಕ, ಆಳಸತ್ವದ ವಿಮರ್ಶಕ, ಬಹುಭಾಷಾ ಪಂಡಿತ, ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಉಪನ್ಯಾಸಕ, ಹಾಗೂ ಕಥಾಸಂಪುಟಸಂಕಲನಕಾರ. ಬಹುಮುಖ ಪ್ರತಿಭೆಯ ಇವರು ಜನಸಿದ್ದು ೧೮-೬-೧೯೦೦ರಂದು ಮಂಡ್ಯ ಜಿಲ್ಲೆಯ ಅಕ್ಕಿಹೆಬ್ಬಾಳಿನಲ್ಲಿ. ಸಾಹಿತ್ಯಲೋಕದ ಈ ದಿವ್ಯತಾರೆ ದಿನಾಂಕ ೨೩-೮-೨೦೦೩. ಇವರ ಮರಣದಿಂದಾಗಿ ಸಾಹಿತ್ಯಲೋಕಕ್ಕೆ ಅಪಾರ ನಷ್ಟವಾಗಿದೆ. ಇವರು ಸಾಹಿತ್ಯಲೋಕಕ್ಕೆ ಇತ್ತಿರುವ ಕೊಡುಗೆಗಳು ಅಮೂಲ್ಯವಾದುವುಗಳು. 'ಅಪರ ವಯಸ್ಕನ ಅಮೆರಿಕಾ ಯಾತ್ರೆಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ, 'ಚಿತ್ರಗಳು-ಪತ್ರಗಳು ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರ, 'ದೇವರು' ಕೃತಿಗೆ ಪಂಪ ಪ್ರಶಸ್ತಿ ಲಭಿಸಿದ್ದರೆ ಇವರ ಸಮಗ್ರ ಸಾಹಿತ್ಯ ಸೇವೆಯನ್ನು ಗೌರವಿಸಿ 'ಮಾಸ್ತಿ ಪ್ರಶಸ್ತಿ', ಮೈಸೂರು ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಲಭಿಸಿರುವುದಲ್ಲದೆ ಅಖಿಲಭಾರತ ೫೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಗಾದಿ ಏರಿದ್ದ ಗೌರವ ಇವರದು.

ಬಿ.ಎಂ.ಶ್ರೀ ಪ್ರತಿಷ್ಠಾನದ ಗೌರವ ಸದಸ್ಯರಾಗಿ ಸಲಹೆಗಾರರಾಗಿ ಸೂಕ್ತ ಮಾರ್ಗದರ್ಶನ ನೀಡಿ ಪ್ರತಿಷ್ಠಾನದ ಬೆಳವಳಣಿಗೆಯಲ್ಲಿ ಸಕ್ರಿಯರಾಗಿದ್ದರು. ಪ್ರತಿಷ್ಠಾನ ಇವರ ನಿಧನಕ್ಕೆ ಸಂತಾಪವನ್ನು ಸೂಚಿಸಿ ಶ್ರದ್ಧಾಂಜಲಿ ಸಭೆಯನ್ನು ನಡೆಸಿ ಒಂದು ನಿಮಿಷದ ಮೌನವನ್ನು ಆಚರಿಸಿದೆ.

**ಎನ್.ಎಸ್. ಸೀತಾರಾಮಶಾಸ್ತ್ರಿ (೯೦)**

ಹಿರಿಯ ಪತ್ರಕರ್ತರಾದ ಇವರು ೨೧-೧೦-೨೦೦೩ರಂದು ನಿಧನರಾದರು. ಇವರು 'ಕನ್ನಡಪ್ರಭ' ದ ಪ್ರಥಮ ಸಂಪಾದಕರಾಗಿದ್ದರು. ಪತ್ರಿಕಾ ಅಕಾಡೆಮಿ, ಟಿ.ಎಸ್.ಆರ್., ಪಿ.ಆರ್. ರಾಮಯ್ಯ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ ಇವರಿಗೆ ಲಭಿಸಿದ್ದವು.

**ಡಾ|| ಹೆಚ್.ಕೆ. ರಂಗನಾಥ್**

ಇವರ ನಿಧನ ದಿನಾಂಕ ೨೬-೩-೨೦೦೩. ಆಗಸ್ಟ್ ೮, ೧೯೨೪ ರಂದು ಜನಿಸಿದ್ದ ಶ್ರೀಯುತರು ನಾಟಕ ಕ್ಷೇತ್ರಕ್ಕೆ ಬಹು ವಿಧದ ಕೊಡುಗೆಗಳನ್ನು ನೀಡಿದ್ದ ಪ್ರತಿಭಾವಂತರು. ಮೈಸೂರು ವಿಶ್ವವಿದ್ಯಾಲಯ, ಆಕಾಶವಾಣಿ, ಕೇಂದ್ರ ಸಂಗೀತ ನಾಟಕ ಅಕಾಡೆಮಿಗಳಲ್ಲಿ ಸೇವೆ ಸಲ್ಲಿಸಿದ್ದು, ಭಾರತೀಯ ವಿಧ್ಯಾಭವನ ಕಾರ್ಯಕ್ರಮಗಳ ನಿರ್ದೇಶಕರಾಗಿಯೂ ಬಹುಶ್ರುತ ಸೇವೆ ಸಲ್ಲಿಸಿದ್ದರು. ಇವರು ಒಳ್ಳೆಯ ನಾಟಕ ರಚನಾಕಾರರೂ ಆಗಿದ್ದರು. ಪ್ರಮುಖ ಕೃತಿಗಳು : ಅಮೃತವರ್ಷ, ಮೂರು ಪ್ರಹಸನಗಳು, ಕನ್ನಡ ನಾಟಕ ಕಲೆ, ಬಣ್ಣ ಬೆಳಕು, ಕರ್ನಾಟಕ

ರಂಗಭೂಮಿ ಮುಂತಾದವು, ೧೮೮೨ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ಲಭಿಸಿದೆ. ಪ್ರತಿಷ್ಠಾನದ ಸ್ಥಾಪಕ ಸದಸ್ಯರಾಗಿದರಲ್ಲದೆ ಹಿತೈಷಿಗಳೂ ಆಗಿದ್ದರು.

**ಜಿ.ವಿ. ಅಯ್ಯರ್ (ಜನನ - ೩-೧೦-೧೯೧೭)**

ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಖ್ಯಾತಿಯ ಜಿ.ವಿ. ಅಯ್ಯರ್‌ರವರು ಬಹು ಪ್ರತಿಭಾವಂತರು. ಕನ್ನಡ ಸಿನೆಮಾರಂಗದ ಭೀಷ್ಮರಂತಿರುವ ಜಿ.ವಿ. ಅಯ್ಯರ್‌ರವರು ಅನೇಕ ಪ್ರಸಿದ್ಧ ಸಿನೆಮಾಗಳನ್ನು ತಯಾರಿಸಿದ್ದಾರೆ. ಇವರ ನಿರ್ದೇಶನದ ಚಲನಚಿತ್ರಗಳು ಕನ್ನಡ ಚಿತ್ರರಂಗದಲ್ಲಿ ಚಿರಸ್ಥಾಯಿಯಾಗಿ ನಿಲ್ಲುವಂತಹವು. ಇವರ ನಿರ್ದೇಶನ-ಮಾರ್ಗದರ್ಶನದಲ್ಲಿ ಬೆಳೆದಿರುವ ನಟ-ನಟಿಯರು ಪ್ರಬುದ್ಧ ನಟನೆಗೆ ಹೆಸರಾಗಿ ಹೆಸರಾಂತ ಕಲಾವಿದರಾಗಿ ಗುರುತಿಸಿಕೊಂಡಿದ್ದಾರೆ. ಇಂತಹ ಪ್ರತಿಭಾಸಂಪನ್ನರಾದ ಜಿ.ವಿ. ಅಯ್ಯರ್ ಅವರು ಭಾರತದಲ್ಲೇ ದಾಖಲೆಯೆನಿಸುವ ಸಂಸ್ಕೃತ ಚಲನಚಿತ್ರಗಳನ್ನು ತಯಾರಿಸಿದ್ದಾರೆ. ಆದಿ ಶಂಕರಾಚಾರ್ಯದಂತಹ ಉತ್ಕೃಷ್ಟ ಚಲನಚಿತ್ರ ನಿರ್ಮಿಸಿದ ಖ್ಯಾತಿ ಇವರದು. ಸಂಸ್ಕೃತದಲ್ಲಿ ಹೊರಬಂದ ಈ ಚಲನಚಿತ್ರ ರಾಷ್ಟ್ರಪ್ರಶಸ್ತಿ ಗಳಿಸಿದೆ. ಮಧ್ವಾಚಾರ್ಯ ಮತ್ತು ರಾಮಾನುಜಾಚಾರ್ಯ ಇವರು ಸಂಸ್ಕೃತದಲ್ಲಿ ನಿರ್ಮಿಸಿದ ಇತರ ಚಲನಚಿತ್ರಗಳು. ಶ್ರೀಯುತರು ಹಲವು ಉತ್ತಮ ನಾಟಕಗಳನ್ನು ರಚಿಸಿರುತ್ತಾರೆ. ೧೯೮೬ರಲ್ಲಿ ಕರ್ನಾಟಕ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿ ನೀಡಿ ಪುರಸ್ಕರಿಸಿದೆ.

೨೧-೧೨-೦೩ರಂದು ಜಿ.ವಿ. ಅಯ್ಯರ್‌ರವರು ನಮ್ಮನ್ನಗಲಿದ್ದಾರೆ.

**ಡಾ|| ಕೆ.ಎಸ್.ನರಸಿಂಹಸ್ವಾಮಿ (ಜನನ : ೨೬-೧-೧೯೧೫)**

ಖ್ಯಾತ ಕನ್ನಡದ ಕವಿ, ಪಂಪ ಪ್ರಶಸ್ತಿ ವಿಜೇತರಾಗಿದ್ದ ಡಾ|| ಕೆ.ಎಸ್. ನರಸಿಂಹಸ್ವಾಮಿ ತಮ್ಮ ನುಡಿ ಗೀತೆಗಳ ದುಂಡುಮಲ್ಲಿಗೆ ದಂಡೆ ನಿರ್ಮಿಸಿ ಕನ್ನಡ ಜನ ಮನವನ್ನು ಗೆದ್ದಿರುವ ಜೀವಂತ ದಂತಕಥೆಯಾಗಿ ಅಪಾರ ಜನಪ್ರಿಯತೆ ಗಳಿಸಿದ್ದರು. ಮೈಸೂರು ಮಲ್ಲಿಗೆಯ ಮೂಲಕ ಕನ್ನಡಕ್ಕೆ ಕವಿಯಾಗಿ ನವೋದಯ ಕಾಲದಲ್ಲಿ ಕಾಣಿಸಿಕೊಂಡ ನರಸಿಂಹಸ್ವಾಮಿಯವರು ಕೆ.ಎಸ್.ನ. ಎಂದೇ ಜನಪ್ರಿಯರಾಗಿ ಕೊನೆಯುವರೆಗೂ ಕವಿಗಳಾಗಿಯೇ ಇದ್ದವರು. ಇವರ ಅನೇಕ ಕವಿತೆಗಳು ಕರ್ನಾಟಕದ ಹಳ್ಳಿ - ಸಂತೆಗಳಲ್ಲಿ ಜನಪದ ಗೀತೆಗಳಾಗಿ ಪ್ರಚಾರದಲ್ಲಿದೆ. ಭಾವಗೀತೆಗಳ ಕ್ಯಾಸೆಟ್ ಪ್ರಪಂಚದಲ್ಲಿಯೂ ಕೆ.ಎಸ್.ನ. ಗೀತೆಗಳೇ ಜಯಭೇರಿ ಸಾಧಿಸಿವೆ. ಇಂತಹ ಮಲ್ಲಿಗೆಯ ಕವಿಯ ಗೀತೆಗಳನ್ನು ಜನತೆ ಪ್ರೇಮಗೀತೆಗಳು ಎಂದು ಕರೆದಿದ್ದರೂ ಅವು ವಾಸ್ತವವಾಗಿ ದಾಂಪತ್ಯಗೀತೆಗಳಾಗಿ ಇವೆ. ಅತ್ಯಂತ ನವಿರಾದ ಕೌಟುಂಬಿಕ ಸಂಭಾಷಣೆಗಳ ರೀತಿಯಲ್ಲಿ ಇವು ಮನಮೆಚ್ಚುತ್ತವೆ. ಇಂತಹ ಕವಿ ಕೆ.ಎಸ್.ನ. ೨೮-೧೨-೨೦೦೩ ರಂದು ಇಹಲೋಕ ತ್ಯಜಿಸಿದ್ದಾರೆ.

ಬಿ.ಎಂ.ಶ್ರೀ ಪ್ರತಿಷ್ಠಾನದ ಹಿತೈಷಿಗಳಾಗಿದ್ದ ಕೆ.ಎಸ್.ನ. ಸಂಸ್ಥಾಪಕ ಸೀತಾರಾಮಯ್ಯನವರೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡಿದ್ದರು. ಇವರ ನಿಧನಕ್ಕೆ ಪ್ರತಿಷ್ಠಾನ ವಿಶೇಷ ರೀತಿಯ ಕಾವ್ಯನಮನವನ್ನೇ ಸಲ್ಲಿಸಲಿದೆ.

ಈ ಎಲ್ಲ ಮಹನೀಯರಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನ ಕರ್ನಾಟಕಲೋಚನದ ಮೂಲಕ ಭಾವಪೂರ್ವಕ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

# ಲೇಖಕರ ವಿಳಾಸಗಳು

೧. **ಪ್ರೊ. ಎಲ್.ಎಸ್. ಶೇಷಗಿರಿರಾವ್**
ಜ್ಯೋತಿ, ೨೬೭, ೩ನೇ ಬ್ಲಾಕ್
ಜಯನಗರ
ಬೆಂಗಳೂರು - ೫೬೦ ೦೧೧

೨. **ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ**
೬೮, ಬಿ. ಆಶ್ರಮದ ರಸ್ತೆ
ಜಯಲಕ್ಷ್ಮೀಪುರಂ
ಮೈಸೂರು - ೫೭೦ ೦೧೨

೩. **ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ**
ನಂ. ೨೦, 'ಗಣೇಶಧಾಮ'
೨ನೇ ಅಡ್ಡರಸ್ತೆ, ೯ನೇ ಮುಖ್ಯರಸ್ತೆ
ರಾಜಮಹಲ್‌ವಿಲಾಸ್ ಬಡಾವಣೆ
ಬೆಂಗಳೂರು - ೫೬೦ ೦೮೦

೪. **ವಾಲ್ಮೀಕಿ ಶ್ರೀನಿವಾಸ ಅಯ್ಯಂಗಾರ್**
ಕೇಶವಪುರಿ, ಖೋಡದಗ್ರಾಮ
ಡೊಂಗರಖರ್ಡ ಅಂಚೆ
ಯವತ್ಮಾಲ ಜಿಲ್ಲಾ - ೪೪೫ ೩೨೩
ಮಹಾರಾಷ್ಟ್ರ

೫. **ಡಾ|| ವ್ಹಿ.ಜಿ. ಪೂಜಾರ**
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಸಂಸ್ಥೆ
ಗುಲ್ಬರ್ಗ ವಿಶ್ವವಿದ್ಯಾಲಯ
ಗುಲ್ಬರ್ಗ - ೫೮೫ ೦೦೬

೬. **ಡಾ|| ಎಸ್.ಎಸ್. ಅಂಗಡಿ**
ಕನ್ನಡ ವಿಶ್ವವಿದ್ಯಾಲಯ ಹಂಪಿ
ಹಸ್ತಪ್ರತಿಶಾಸ್ತ್ರ ವಿಭಾಗ
ವಿದ್ಯಾರಣ್ಯ
ಕಾಮಾಲಾಪುರ - ೫೮೩ ೨೭೬

೭. **ಡಾ|| ಜಿ.ಎನ್. ಉಪಾಧ್ಯ**
ಲೆಕ್ಚರರ್
ಡಿಪಾರ್ಟ್‌ಮೆಂಟ್ ಆಫ್ ಕರ್ನಾಟಕ
ಯೂನಿವರ್ಸಿಟಿ ಆಫ್ ಮುಂಬಯಿ
ವಿದ್ಯಾನಗರಿ, ಸಾಂತಾಕ್ರುಜ್ (ಈಸ್ಟ್)
ಮುಂಬಯಿ - ೪೦೦ ೦೯೮

೮. **ಬೆಂ. ಶಾ. ಶ್ಯಾಮಲಾ ರತ್ನಕುಮಾರಿ**
ನಂ. ೨೭, ವಿಶಾಲಾಕ್ಷಿ ವೃತ್ತ
೨ನೇ ಮುಖ್ಯರಸ್ತೆ, ೨ನೇ ಬ್ಲಾಕ್
ತ್ಯಾಗರಾಜನಗರ
ಬೆಂಗಳೂರು - ೫೬೦ ೦೨೮

# ಸದಸ್ಯತ್ವ ಪರಿಷ್ಕರಣ

ಸನ್ಮಾನ್ಯ ಸದಸ್ಯರೆ,

ತಾವು ಅಭಿಮಾನವಿಟ್ಟು ಪ್ರತಿಷ್ಠಾನದ ಆಜೀವ ಸದಸ್ಯರಾಗಿ ಸಹಕರಿಸುತ್ತಿರುವುದಕ್ಕಾಗಿ ಕೃತಜ್ಞತೆಗಳು.

ದಿನಾಂಕ ೧೮-೯-೦೩ರಂದು ನಡೆದ ಪ್ರತಿಷ್ಠಾನದ ಸರ್ವಸದಸ್ಯರ ಸಭೆಯಲ್ಲಿ ಸದಸ್ಯತ್ವದ ಶುಲ್ಕವನ್ನು ಹೆಚ್ಚಿಸುವ ಬಗ್ಗೆ ಸದಸ್ಯರಿಂದಲೇ ಸೂಚನೆ ಬಂದು ಈ ಕೆಳಕಂಡಂತೆ ತೀರ್ಮಾನಿಸಲಾಯಿತು.

"ಸಂಸ್ಥೆ ಸ್ಥಾಪನೆಯಾದಾಗಿನಿಂದ ಸದಸ್ಯತ್ವ ಶುಲ್ಕವನ್ನು ಹೆಚ್ಚಿಸಿಲ್ಲದಿರುವುದರಿಂದ, ಅಂಚೆ ಇತ್ಯಾದಿ ವೆಚ್ಚಗಳೆಲ್ಲ ಅಧಿಕವಾಗಿರುವುದರಿಂದ ಮತ್ತು ಸಂಸ್ಥೆಯ ನಿರ್ವಹಣೆಗೆ ಹೆಚ್ಚಿನ ಹಣದ ಅಗತ್ಯವಿರುವುದರಿಂದ ಸದಸ್ಯತ್ವವನ್ನು ಕೆಳಕಂಡಂತೆ ಹೆಚ್ಚಿಸುವುದು ಅತ್ಯಗತ್ಯವಾಗಿದೆ.

## ಪರಿಷ್ಕೃತ ಸದಸ್ಯತ್ವದ ವಿವರ

| | | |
|---|---|---|
| ವಾರ್ಷಿಕ ಸದಸ್ಯತ್ವ | ರೂ. ೫೦-೦೦ | (ಇದ್ದದ್ದು ೨೫-೦೦) |
| ಆಜೀವ ಸದಸ್ಯತ್ವ | ರೂ. ೫೦೦-೦೦ | (ಇದ್ದದ್ದು ೨೫೦-೦೦) |
| ದಾನಿ ಸದಸ್ಯತ್ವ | ರೂ. ೫೦೦೦-೦೦ | (ಇದ್ದದ್ದು ೧೦೦೦-೦೦) |
| ವಿಶೇಷದಾನಿ ಸದಸ್ಯತ್ವ | ರೂ. ೧೦,೦೦೦-೦೦ | (ಇದ್ದದ್ದು ೨೦೦೦-೦೦) |
| ಕರ್ನಾಟಕಲೋಚನ ಚಂದಾ ವಾರ್ಷಿಕ | ರೂ. ೪೦-೦೦ | (ಇದ್ದದ್ದು ೧೫-೦೦) |
| ಆಜೀವ | ರೂ. ೪೦೦-೦೦ | (ಇದ್ದದ್ದು ೧೦೦-೦೦) |
| ಸಂಸ್ಥೆಗಳಿಗೆ (ವಾರ್ಷಿಕ) | ರೂ. ೧೦೦-೦೦ | (ಇದ್ದದ್ದು ೨೫-೦೦) |

ಹೆಚ್ಚಿಸಿದ ಸದಸ್ಯತ್ವದ ಹಣ ಇನ್ನುಮುಂದೆ ಹೊಸದಾಗಿ ಸದಸ್ಯರಾಗುವವರಿಗೆ ಅನ್ವಯವಾಗತಕ್ಕದೆಂದು, ಈಗಾಗಲೇ ಸದಸ್ಯರಾಗಿರುವವರಿಗೂ ವಿನಂತಿಸಿಕೊಳ್ಳಬಹುದೆಂದೂ; ಆದರೆ ಕಡ್ಡಾಯವಲ್ಲವೆಂದೂ, ಹೆಚ್ಚಿಸಿದ ಮೊತ್ತವನ್ನು ಅವರು ಪಾವತಿಸದಿದ್ದರೂ ಸದಸ್ಯತ್ವ ಮುಂದುವರಿಯತಕ್ಕದೆಂದೂ ಬಾಕಿ ಉಳಿಸಿಕೊಂಡಿರುವವರು ಮಾತ್ರ ಹೆಚ್ಚಿಸಿದ ಸದಸ್ಯತ್ವದ ಮೊತ್ತವನ್ನು ಪಾವತಿಸತಕ್ಕದ್ದು"

ಮಹಾಸಭೆಯ ಈ ತೀರ್ಮಾನವನ್ನು ತಮ್ಮ ಅವಗಾಹನೆಗೆ ತರುತ್ತಾ, ದಯಮಾಡಿ ಹೆಚ್ಚುವರಿ ಮೊತ್ತವನ್ನು ಪಾವತಿಮಾಡಿ ಸಂಸ್ಥೆಯ ಚಟುವಟಿಕೆಗೆ ನೆರವಾಗಬೇಕೆಂದು ವಿನಂತಿಸುತ್ತೇವೆ. ಮಹಾಸಭೆಯ ಅಭಿಪ್ರಾಯದಂತೆ ಇದು ಕೇವಲ ವಿನಂತಿಯೇ ವಿನಾ ಒತ್ತಾಯವಲ್ಲ.

ತಮ್ಮಗಳ ಸಹಾಯ ಸಹಕಾರದಿಂದಷ್ಟೇ ಪ್ರತಿಷ್ಠಾನದ ಈವರೆಗಿನ ಸಾಧನೆ ನಡೆದಿದೆ. ಈಗ ಪ್ರತಿಷ್ಠಾನಕ್ಕೆ ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ **ಸ್ನಾತಕೋತ್ತರ ಸಂಶೋಧನಾ**

**ಸಂಸ್ಥೆ** ಎಂಬ ಮಾನ್ಯತೆ ಲಭಿಸಿದ್ದು, ಪ್ರತಿಷ್ಠಾನದ ಮೂಲಕ ಪಿಎಚ್.ಡಿ. ಅಧ್ಯಯನವನ ಕೈಗೊಳ್ಳಬಹುದಾಗಿದೆ. ಬೆಳ್ಳೂರಿನಲ್ಲಿ ಆಚಾರ್ಯ ಬಿ.ಎಂ.ಶ್ರೀ. ಶತಮಾನ ಭವನ ೧೯೯೪ರಿಂ ಚಟುವಟಿಕೆಯಲ್ಲಿದೆ. ಬೆಂಗಳೂರಿನಲ್ಲಿ **ಬಿ.ಎಂ.ಶ್ರೀ. ಕಲಾಭವನ**ದ ಎರಡು ಮಹಡಿಗಳ ಸಿದ್ಧವಾಗಿದ್ದು ಇನ್ನೂ ಒಂದು ಮಹಡಿ ಆಗಬೇಕಾಗಿದೆ. ಸಿದ್ಧವಾಗಿರುವ ಮಹಡಿಗೆ "ಎಂ.ವಿ.ಸೀ. ಸಭಾಂಗಣ" ಎಂದು ನಾಮಕರಣ ಮಾಡಲಾಗಿದ್ದು ಈ ಸಭಾಂಗಣವನ್ನು ಸಾರ್ವಜನಿಕರಿ ಒದಗಿಸಲಾಗುತ್ತಿದೆ. ಇದಕ್ಕೂ ಮಹಾಸಭೆ ಈ ಕೆಳಕಂಡಂತೆ ತೀರ್ಮಾನಿಸಿದೆ.

"ಎಂ.ವಿ.ಸೀ. ಸಭಾಂಗಣವನ್ನು ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಮಾತ್ರ ನೀಡತಕ್ಕದ್ದು. ಒಂದು ದಿನಕ್ಕೆ ೧೦೦೦-೦೦ ರೂ.ಗಳನ್ನು, ಅರ್ಧ ದಿನಕ್ಕೆ ೭೫೦-೦೦ ರೂ.ಗಳನ್ನು ಸೇವಾ ಶುಲ್ಕವಾಗಿ ಪಡೆಯುವುದು".

ಇದೀಗ ಪ್ರತಿಷ್ಠಾನಕ್ಕೆ **ರಜತೋತ್ಸವ ವರ್ಷ**ವಾಗಿದ್ದು ಹಲವು ಯೋಜನೆಗಳನ ಹಮ್ಮಿಕೊಳ್ಳಲಾಗಿದೆ. ಇದಕ್ಕೆಲ್ಲ ತಮ್ಮಗಳ ಸಹಾಯಹಸ್ತವನ್ನು ನಿರೀಕ್ಷಿಸುತ್ತೇವೆ. ಸಂಸ್ಥಾಪಕರಾ ಪ್ರೊ॥ ಎಂ.ವಿ. ಸೀತಾರಾಮಯ್ಯನವರು ಹಾಕಿಕೊಟ್ಟ ಮಾರ್ಗದಲ್ಲೇ ಮುನ್ನಡೆಯುತ್ತ ಅವ ಕನಸುಗಳನ್ನು ನನಸುಮಾಡುವಲ್ಲಿ ಶಕ್ತಿಮೀರಿ ಶ್ರಮಿಸುತ್ತಿದ್ದೇವೆ ಎಂದು ವಿನಮ್ರವಾ ತಿಳಿಸಲಿಚ್ಛಿಸುತ್ತೇವೆ.

ಇದರೊಂದಿಗೆ ಸರ್ವ ಸದಸ್ಯರ ಸಭೆಯಲ್ಲಿ ಆದ ತೀರ್ಮಾನದಂತೆ ಸದಸ್ಯತ್ವ ಅರ್ಜಿಯಲ್ಲಿ ಸದಸ್ಯರ ಜೀವನ - ಸಾಧನೆ ವಿವರವನ್ನು ಪಡೆಯಲು ಪರಿವರ್ತಿಸಿದ ಅಪೇಕ ಪತ್ರವನ್ನು ಇಟ್ಟಿದೆ. ದಯವಿಟ್ಟು ಈ ಅರ್ಜಿಯನ್ನು ತುಂಬಿ, ಭಾವಚಿತ್ರ ಅಂಟಿಸಿ ಕಳುಹಿ ಕೊಡಲು ಕೋರಿದೆ.

ಇದರೊಂದಿಗೆ ರಜತೋತ್ಸವ ಮನವಿಯನ್ನೂ ಕಳುಹಿಸಿದೆ. ದಯವಿಟ್ಟು ದಾನ ಜಾಹೀರಾತು ಇತ್ಯಾದಿ ಯಾವುದಾದರೂ ರೂಪದಲ್ಲಿ ಸಹಾಯಹಸ್ತ ಚಾಚಬೇಕಾ ವಿನಂತಿಸುತ್ತೇವೆ.

ಸಹಾಯ ಸಹಕಾರಗಳನ್ನು ನಿರೀಕ್ಷಿಸುತ್ತ,

ವಂದನೆಗಳೊಂದಿಗೆ

ತಮ್ಮ ವಿಶ್ವಾಸಿಗಳು

| | | |
|---|---|---|
| *ಪ್ರೊ॥ ಡಿ. ಲಿಂಗಯ್ಯ* | *ಪ್ರೊ॥ ನಾ. ಗೀತಾಚಾರ್ಯ* | *ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿ* |
| ಕೋಶಾಧಿಕಾರಿ | ಗೌ॥ ಕಾರ್ಯದರ್ಶಿ | ಅಧ್ಯಕ್ಷರು |



## ‘ಸಿರಿಕಂಟ’ - ಹಸ್ತಪ್ರತಿ ವೇದಿಕೆಯಿಂದ
## ರಜತಮಹೋತ್ಸವ ವಿಶೇಷ ಕಾರ್ಯಕ್ರಮವಾಗಿ
## “ಮನೆಬಾಗಿಲಿಗೆ ಪ್ರಾಚೀನ ಹಸ್ತಪ್ರತಿ ದರ್ಶನ”

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಪ್ರೊ|| ಎಂ. ವೀ. ಸೀತಾರಾಮಯ್ಯನವರಿಂದ ಸ್ಥಾಪನೆಯಾಗಿ ಮೇ 6, 1979 ರಂದು ರಾಷ್ಟ್ರಕವಿ ಕುವೆಂಪು ಅವರಿಂದ ಉದ್ಘಾಟನೆಯಾಗಿ 25ನೇ ವರ್ಷದಲ್ಲಿ ಮುನ್ನಡೆಯುತ್ತಿರುವ ಕನ್ನಡ ಸಾಹಿತ್ಯ ಸಂಶೋಧನ ಸೇವಾ ಕೇಂದ್ರ.

60ಕ್ಕೂ ಹೆಚ್ಚು ಮೌಲಿಕ ಗ್ರಂಥಗಳ ಪ್ರಕಟಣೆ, ‘ಕರ್ನಾಟಕಲೋಚನ’ ವಿದ್ವತ್ ಪತ್ರಿಕೆಯ ಪ್ರಕಟಣೆ, 10,000ಕ್ಕೂ ಅಧಿಕ ಆಕರ ಗ್ರಂಥಗಳುಳ್ಳ ಗ್ರಂಥಾಲಯ, 3000ಕ್ಕೂ ಹೆಚ್ಚಿನ ಪ್ರಾಚೀನ ಹಸ್ತಪ್ರತಿ ಸಂಗ್ರಹಾಲಯ, ಉಚಿತ ವಾಚನಾಲಯಗಳ ನಿರ್ವಹಣೆ; ಬೆಳ್ಳೂರು ಮತ್ತು ಬೆಂಗಳೂರುಗಳಲ್ಲಿ ಆಚಾರ್ಯ ಬಿ.ಎಂ.ಶ್ರೀ. ಸ್ಮಾರಕ ಭವನಗಳ ಸ್ಥಾಪನೆ, ಹಲವು ಮಹನೀಯರ ನೆನಪಿನ ದತ್ತಿ ಕಾರ್ಯಕ್ರಮಗಳು, ಸಹೃದಯಗೋಷ್ಠಿ, ಹಸ್ತಪ್ರತಿ ತರಗತಿ, ಸೇವಾಕೇಂದ್ರ ಹೀಗೆ ಅನೇಕ ಕಾರ್ಯಕ್ರಮಗಳನ್ನು ಪ್ರತಿಷ್ಠಾನ ನಡೆಸುತ್ತಿದೆ.

ಪ್ರತಿಷ್ಠಾನದ ಬಹಳ ಮುಖ್ಯ ಚಟುವಟಿಕೆಯೆಂದರೆ ನಾಡಿನ ಅಮೂಲ್ಯ ಆಸ್ತಿಯಾದ, ಸಾಹಿತ್ಯ- ಸಂಸ್ಕೃತಿಗಳ ನಿಧಿಯಾದ ಪ್ರಾಚೀನ ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣೆ ಮತ್ತು ದಾಖಲಿಕರಣ. ಹಸ್ತಪ್ರತಿ ಕ್ಷೇತ್ರದಲ್ಲಿ ಪ್ರತಿಷ್ಠಾನ ‘ಹಸ್ತಪ್ರತಿಶಾಸ್ತ್ರ’ ಮತ್ತು ‘ಹಸ್ತಪ್ರತಿ ಅಧ್ಯಯನ’ಗಳನ್ನು ಹುಟ್ಟು ಹಾಕಿದ್ದು ಇಂದು ಇವು ವಿಶ್ವವಿದ್ಯಾನಿಲಯದ ಮಾನ್ಯತೆಯಿರುವ ಅಧ್ಯಯನಗಳಾಗಿವೆ.

ಜನಸಾಮಾನ್ಯರಲ್ಲಿ ಇವುಗಳ ಬಗ್ಗೆ ತಿಳುವಳಿಕೆ ಮೂಡಿಸುವುದಕ್ಕಾಗಿ ಪ್ರತಿವರ್ಷ ಈ ಹಸ್ತಪ್ರತಿಗಳ ಪ್ರದರ್ಶನವನ್ನು ನಡೆಸುತ್ತಾ ಬಂದಿರುವ ಪ್ರತಿಷ್ಠಾನ ಈ ರಜತೋತ್ಸವ ವರ್ಷದಲ್ಲಿ ಹಸ್ತಪ್ರತಿ ವಿದ್ಯಾರ್ಥಿಗಳ ತರಬೇತಿ ವೇದಿಕೆ ‘ಸಿರಿಕಂಟ’ದ ಮೂಲಕ ಜನತೆಯ ಹತ್ತಿರಕ್ಕೆ ಮನೆಬಾಗಿಲಿಗೆ ಕೊಂಡೊಯ್ಯುವ ಈ ‘ಹಸ್ತಪ್ರತಿ ದರ್ಶನ’ ಯೋಜನೆಯನ್ನು ರೂಪಿಸಿದೆ. ಇದೊಂದು ಅಪರೂಪದ ಸಂದರ್ಭವಾಗಿದ್ದು ಮರೆಯದೆ ಬನ್ನಿ, ನೋಡಿ, ನಿಮ್ಮ ನೆನಪಿನಲ್ಲಿ ಶಾಶ್ವತವಾಗಿರಿಸಿ.

**ಮನೆ ಮನೆಗಳಲ್ಲಿ ಅಟ್ಟಗಳಲ್ಲಿ, ಹಳೆ ವಸ್ತುಗಳ ನಡುವೆ, ಹುಳುಹಿಡಿದು, ಧೂಳು ಹತ್ತಿ ಹಾಳಾಗುತ್ತಿರುವ ನಮ್ಮ ಹಿಂದಿನವರ ಜ್ಞಾನ ನಿಧಿಗಳಾಗಿದ್ದ ಈ ಅಮೂಲ್ಯ ಹಸ್ತಪ್ರತಿಗಳನ್ನು ಸಂರಕ್ಷಿಸುವತ್ತ ನಮ್ಮೊಂದಿಗೆ ನೀವೂ ಹೆಜ್ಜೆ ಹಾಕಿ. ನಾಡಿನ ಅಮೂಲ್ಯ ಸಂಪತ್ತನ್ನು ಉಳಿಸಿ.**

